

ಸ್ಕೌಟ್ ಶತಮಾನೋತ್ಸವ - 2007

Price Rs. 3.00/- per copy only




# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

*News Magazine*

VOL.-7 DECEMBER - 2007 NO. - 11



ಕರ್ನಾಟಕ ಘನತೆವತ್ತ ರಾಜ್ಯಪಾಲರಾದ ಶ್ರೀರಾಮೇಶ್ವರ ಠಾಕೂರ್‌ರವರು ದಕ್ಷಿಣ ಕನ್ನಡ ಜಿಲ್ಲೆಗೆ ಭೇಟಿ ನೀಡಿದಾಗ ಜಿಲ್ಲಾಸಂಸ್ಥೆಯ ಅಧ್ಯಕ್ಷ ಹಾಗೂ ಜಿಲ್ಲಾಧಿಕಾರಿಗಳಾದ ಶ್ರೀ ಎಂ. ಮಹೇಶ್ವರರಾವ್ ಭಾ.ಆ.ಸೇ ಮತ್ತು ಜಿಲ್ಲಾ ಮುಖ್ಯ ಆಯಯಕ್ತರಾದ ಶ್ರೀ ಐ.ಎ. ಕೈರನ್ನ ಪುಷ್ಪಗುಚ್ಛ ನೀಡಿ ಸ್ವಾಗತಿಸಿದರು.



ಹಾಸನ ಜಿಲ್ಲೆಯ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ನೂತನ ಸಮುದಾಯ ಭವನದ ಉದ್ಘಾಟನೆಯನ್ನು ಶ್ರೀ ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು ಸುತ್ತೂರು ಮಹಾ ಸಂಸ್ಥಾನ ಮೈಸೂರು ಇವರು ದಿನಾಂಕ 19-12-2007ರಂದು ನೇರವೇರಿಸಿದರು. ಈ ಸಮಾರಂಭದಲ್ಲಿ ಶ್ರೀ ಶ್ರೀ ಶ್ರೀ ಶಿವಾನಂದ ಶಿವಯೋಗಿರಾಜೇಂದ್ರ ಮಹಾಸ್ವಾಮಿಗಳು ಕೋಡಿಮಠ, ಹಾರನಹಳ್ಳಿ ಶ್ರೀ ಶ್ರೀ ಶ್ರೀ ಶಂಭುನಾಥ ಮಹಾಸ್ವಾಮಿಗಳು ಆದಿಚುಂಚನಗಿರಿ ಮಠ, ಹಾಸನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾಧಿಕಾರಿಗಳಾದ ಶ್ರೀ ಕೆ.ಹೆಚ್. ಅಶ್ವಥನಾರಾಯಣಗೌಡ ಭಾ.ಆ.ಸೇ, ಹಾಗೂ ಜಿಲ್ಲಾ ಸ್ಕೌಟ್ ಆಯುಕ್ತರಾದ ಡಾ|| ವೈ.ಎಸ್. ವೀರಭದ್ರಪ್ಪ ಹಾಗೂ ಇತರ ಪದಾಧಿಕಾರಿಗಳು



ಶ್ರೀ ಅಮರ್ ಕುಮಾರ್ ಪಾಂಡೆ, ಐ.ಪಿ.ಎಸ್., ಆಯುಕ್ತರು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕರ್ನಾಟಕ ಸರ್ಕಾರ ಇವರು ರಾಜ್ಯ ತರಬೇತಿ ಕೇಂದ್ರ ಡಾ|| ಅನಿ ಬೆಸೆಂಟ್ ಪಾರ್ಕ್ ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ದಿನಾಂಕ 11-12-2007 ರಂದು ಭೇಟಿ ನೀಡಿ ತರಬೇತಿ ಕೇಂದ್ರದ ಮೂಲಭೂತ ಸೌಕರ್ಯಗಳ ಬಗ್ಗೆ ಪರಿಶೀಲನೆ ನಡೆಸಿದಾಗ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ವಿವರಗಳನ್ನು ನೀಡಿದರು ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀಮತಿ ಎಸ್. ಲಲಿತಮ್ಮ ಸಭೆಯಲ್ಲಿ ಭಾಗವಹಿಸಿದರು



ಹಾವೇರಿ ಜಿಲ್ಲೆಯಲ್ಲಿ ಇತ್ತೀಚೆಗೆ ನಡೆದ ಸ್ಕೌಟ್ ಶಿಕ್ಷಕ, ಗೈಡ್ ಶಿಕ್ಷಕಿಯರ ಸಮಾವೇಶವನ್ನು ಶ್ರೀ ಬಿ.ವಿ. ಬೆಲ್ಲದ, ಉಪನಿರ್ದೇಶಕರು ಹಾಗೂ ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಉದ್ಘಾಟಿಸುತ್ತಿರುವುದು, ಶ್ರೀಪ್ರಭಾಕರರಾವ್ ಮಂಗಳೂರು, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಮಾಧುರಿ ದೇವಧರ್, ಜಿಲ್ಲಾ ಆಯುಕ್ತೆ(ಗೈಡ್ಸ್). ಶ್ರೀ ಎಂ.ಡಿ. ಬಳ್ಳಾರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಶ್ರೀಮತಿ ಹೆಚ್.ಎಂ. ಪ್ರೇಮ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.



ಧಾರವಾಡ ಜಿಲ್ಲಾ ತರಬೇತಿ ಕೇಂದ್ರ, ದಢ್ಡಿ ಕಮಲಾಪುರದಲ್ಲಿ ಡಿಸೆಂಬರ್ 8ರಿಂ 17ರವರೆಗೆ ಸ್ಕೌಟ್ ಮಾಸ್ಟರ್‌ಗಳ ಮೂಲ ತರಬೇತಿ ಶಿಬಿರ ನಡೆಯಿತು ದಿನಾಂ 17-12-2007ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಸಾರ್ವಜನಿ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಎಂ.ಹೆಚ್. ಷರೀಫ್‌ರವರುಮುಖ ಅತಿಥಿಗಳಾಗಿ, ಜಿಲ್ಲಾ ಉಪನಿರ್ದೇಶಕರಾದ ಶ್ರೀ ಆರ್.ಸಿ.ಹಲಗತ್ತಿಯವರ ಅಧ್ಯಕ್ಷತೆವಹಿಸಿದ್ದರು. ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರ ಶ್ರೀ ಬಿ.ವೈ. ಭಜಂತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಇತರ ಪದಾಧಿಕಾರಿಗಳನ ಚಿತ್ರದಲ್ಲಿ ಕಾಣಬಹುದು.



ಧಾರವಾಡದ ಸಸ್ಯಚೇತನದಲ್ಲಿ ಇತ್ತೀಚಿಗೆ ನಡೆದ ಸ್ಕೌಟ್ ಮಾಸ್ಟರ್‌ಗಳ ಮೂಲ ತರಬೇತಿ ಶಿಬಿರದಲ್ಲಿ ಪಾಲ್ಗೊಂಡ ಶಿಬಿರಾರ್ಥಿಗಳ ವಿಹಂಗಮ ನೋಟ.



ರಾಯಚೂರು ಜಿಲ್ಲೆಯಲ್ಲಿ ಇತ್ತೀಚೆಗೆ ನಡೆದ ಸ್ಕೌಟ್ ಧ್ವಜ ದಿನಾಚರಣೆಯಂದು ಸ್ಕೌಟ್ ಧ್ವಜ ಬಿಡುಗಡೆ ಮಾಡುತ್ತಿರುವ ಶ್ರೀ ಭೀಮನಗೌಡ ಇಟಗಿ, ಶ್ರೀ ಈರಣ್ಣ, ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು, ಡಾ॥ ನರಸಿಂಹ ಮೂರ್ತಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀ ನರಸಪ್ಪ, ಶ್ರೀ ಖಾಜಾಹುಸೇನ್ ಹೊಸೂರು ಹಾಗೂ ಇವರು ಉಪಸ್ಥಿತರಿದ್ದರು.



ಉಡುಪಿ ಜಿಲ್ಲೆ ಬೈಂದೂರು ಸ್ಥಳೀಯ ಸಂಸ್ಥೆ ನೆಡೆಸಿದ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಾಥಮಿಕ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಬೈಂದೂರು ಶಾಸಕ ಶ್ರೀ ಗೋಪಾಲಪೂಜಾರಿ ರವರು ಮಾತನಾಡುತ್ತಿರುವುದು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಾಜು ದೇವಾಡಿಗ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಬಿ. ಶೇಖರ್ ಹಾಗೂ ಇತರ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.




Vol - 7 October - 2007 No. 9

ಕರ್ನಾಟಕದ ಸಮಸ್ತರಿಗೆ ಹಾಗೂ ಸ್ಕೌಟ್-ಗೈಡ್‌ನ ಎಲ್ಲ ಕಾರ್ಯಕರ್ತರಿಗೆ 51ನೇ ರಾಜ್ಯೋತ್ಸವ ಹಾಗೂ ದೀಪಾವಳಿ ಹಬ್ಬದ ಹಾರ್ದಿಕ ಶುಭಾಷಯಗಳು



## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ..........................................

## ಸಮಸ್ತರಿಗೂ ಶುಭ ಕ್ರಿಸ್‌ಮಸ್, ನೂತನ ವರ್ಷದ ಹಾಗೂ ಸಂಕ್ರಾಂತಿಯ ಹಾರ್ದಿಕ ಶುಭಾಶಯಗಳು

*ಮಾನ್ಯರೆ,*

2007-08 ಸ್ಕೌಟ್ ಚಳವಳಿಯ ವಿಶ್ವ ಶತಮಾನೋತ್ಸವ ವರ್ಷ. ಆಗಸ್ಟ್ 1, 2007 ರಂದು ಪ್ರಾರಂಭವಾದ ಸ್ಕೌಟ್ ಶತಮಾನೋತ್ಸವ ಕಾರ್ಯಕ್ರಮಗಳು, ಜುಲೈ 30, 2008ರ ವರೆವಿಗೆ ರಾಜ್ಯದೆಲ್ಲೆಡೆ ಆಯೋಜಿಸಲಾಗಿದ್ದು, ಈಗಾಗಲೇ ಹಲವಾರು ಜಿಲ್ಲೆಗಳು ಶತಮಾನೋತ್ಸವ ಕಾರ್ಯಕ್ರಮಗಳು, ಮೇಳ ಹಾಗೂ ರ್‍ಯಾಲಿಗಳನ್ನು ನಡೆಸಿದ ವರದಿಗಳನ್ನು ಸಂಚಿಕೆಯಲ್ಲಿ ಪ್ರಕಟಿಸಿದ್ದು, ಈ ತಿಂಗಳಲ್ಲಿ ಹಲವು ಜಿಲ್ಲೆಗಳು ವಾರ್ಷಿಕ ಮೇಳಗಳನ್ನು ಆಯೋಜಿಸಿದ ವರದಿಗಳು ಈ ಸಂಚಿಕೆಯಲ್ಲಿ ಪ್ರಕಟವಾಗಿದೆ. ನೂರು ವರ್ಷಗಳ ಸಂಘ, ಸಂಸ್ಥೆಗಳ, ರಾಜ್ಯ, ರಾಷ್ಟ್ರ ಹಾಗೂ ವ್ಯಕ್ತಿಗಳ ಇತಿಹಾಸದಲ್ಲಿ ಮಹತ್ವದ ಮೈಲಿಗಲ್ಲು. ಕರ್ನಾಟಕದ ಸ್ಕೌಟಿಂಗ್ - ಗೈಡಿಂಗ್ ಇತಿಹಾಸವನ್ನು ಅವಲೋಕಿಸಿದಾಗ, ರಾಜ್ಯದಾದ್ಯಂತ ಆಗಿರುವ ಸಾಧನೆಗಳ ಪಟ್ಟಿ ಹಲವಾರು ಇದ್ದರೂ, ಮಾಡಬೇಕಾಗಿರುವ ಪಟ್ಟಿಯೂ ಸಹ ಸಾಕಷ್ಟು ಉಳಿದಿರುವುದು ನಮಗೆಲ್ಲಾ ಗೊತ್ತಿದೆ. ಕರ್ನಾಟಕದಲ್ಲೇ, ಚಳವಳಿಗೆ ಈಗ 90 ವರ್ಷಗಳು ತುಂಬಿವೆ. 30 ಜಿಲ್ಲಾ ಸಂಸ್ಥೆಗಳು, 216 ಸ್ಥಳೀಯ ಸಂಸ್ಥೆಗಳು 9000ಕ್ಕೂ ಹೆಚ್ಚಿನ ದಳಗಳು - ಘಟಕಗಳು, 9 ದಶಕಗಳ ಸುದೀರ್ಘ ಇತಿಹಾಸದಲ್ಲಿ ಸಾಕಷ್ಟು ಸಾಧಿಸಿದ್ದರೂ, ಇಂದಿನ ತಲೆಮಾರಿನ ವಿಚಾರಕ್ಕನುಗುಣವಾಗಿ ಚಳವಳಿಯ ವಿವಿಧ ಹಂತದ ಸಂಘಟನೆಗಳು ತನ್ನ ಕಾಲಮೇಲೆ ನಿಲ್ಲುವ ಪ್ರಯತ್ನವನ್ನು ಮಾಡಿಲ್ಲದಿರುವುದು ಇಂದಿಗೂ ಕಾಣಬರುವ ಸತ್ಯ.

ನನ್ನ ಪ್ರಾರ್ಥನೆ ಏನೆಂದರೆ, ದಯಮಾಡಿ ಆದಷ್ಟು ಜಾಗ್ರತೆ ದಳಗಳನ್ನ, ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳನ್ನು ಆರ್ಥಿಕವಾಗಿ ಹಾಗೂ ಇನ್ನೂ ಹೆಚ್ಚು ಸಮಾಜಮುಖಿಯಾಗಿ ಬೆಳಸುವ ಸತತ ಪ್ರಯತ್ನವನ್ನು ಮಾಡಲು ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಸಾವಿರಾರು ಕಾರ್ಯಕರ್ತರುಗಳಿಗೆ ಕೋರಿಕೆ.

ರಾಜ್ಯದ ಕೆಲವೇ ಕೆಲವು ಜಿಲ್ಲೆಗಳನ್ನು ಬಿಟ್ಟರೆ, ಸಾಕಷ್ಟು ಜಿಲ್ಲೆಗಳು ಇನ್ನೂ ಸ್ವಾವಲಂಬಿಯಾಗದಿರುವುದು ನಮಗೆಲ್ಲಾ ತಿಳಿದಿರುವ ವಿಷಯ. ಇಂದಿನ ಜಾಗತೀಕರಣ ಹಾಗು ಸ್ಪರ್ಧಾತ್ಮಕ ಪರಿಸ್ಥಿತಿಯಲ್ಲಿ ನಮ್ಮ ಚಿಂತನೆಗಳನ್ನು ಸೂಕ್ತವಾಗಿ ಮಾರ್ಪಾಡುಗೊಳಿಸಿ ಚಳವಳಿಯ ವಿವಿಧ ಹಂತಗಳನ್ನು ಸ್ವಾವಲಂಬಿ ಮಾಡುವತ್ತ ದಿಟ್ಟ ಹೆಜ್ಜೆ ಹಾಕುವುದು ಇಂದಿನ ಆದ್ಯತೆ ಹಾಗು ಅವಶ್ಯಕತೆ ಎಂಬುದನ್ನು ತಮ್ಮಗಳ ಗಮನಕ್ಕೆ ತರಲಿಚ್ಛಿಸುತ್ತೇನೆ.

ಆದುದರಿಂದ, ರಾಜ್ಯ ಸಂಸ್ಥೆಯನ್ನೊಳಗೊಂಡಂತೆ, ಎಲ್ಲಾ ಹಂತದಲ್ಲೂ ಮುಂದಿನ ಮೂರು ವರ್ಷಗಳಲ್ಲಿ ಸ್ವಶಕ್ತಿ ಮೇಲೆ ನಿಲ್ಲುವ ದೃಢ ಸಂಕಲ್ಪವನ್ನು ನಾವೆಲ್ಲಾ ಮಾಡುವದರೊಂದಿಗೆ, ಚಳವಳಿಯ ಚಿಂತನೆ, ಆದರ್ಶ ಹಾಗು ವ್ಯಕ್ತಿತ್ವವಿಕಸನ ತರಬೇತಿ ನೀಡುವ ಮೂಲಕ ಯುವಜನತೆಯನ್ನು ಉತ್ತಮ ನಾಗರಿಕರಾಗಲು ಸ್ಕೌಟ್ - ಗೈಡ್ ತತ್ವಾದರ್ಶಗಳತ್ತ ಸೆಳೆಯುವಲ್ಲಿ ಸೂಕ್ತ ಕಾರ್ಯಕ್ರಮ ಏರ್ಪಡಿಸುವುದು ಇಂದಿನ ಅವಶ್ಯಕತೆ.

ದಿನಾಂಕ 28 ನವೆಂಬರ್ 2007 ನವದೆಹಲಿಯಲ್ಲಿ ಜರುಗಿದ ರಾಷ್ಟ್ರೀಯ ಸಂಸ್ಥೆಯ ವಾರ್ಷಿಕ ಮಹಾಸಭೆಯಲ್ಲಿ ರಾಜ್ಯದ 8 ಜನ ಪ್ರತಿನಿಧಿಗಳು ಭಾಗವಹಿಸಿದ್ದೆವು. ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀಮತಿ ಗೀತಾ ನಟರಾಜ್, ರಾಷ್ಟ್ರೀಯ ಕಾರ್ಯಕಾರಿ ಸಮಿತಿಯ ಸದಸ್ಯತ್ವಕ್ಕೆ ಸ್ಪರ್ಧಿಸಿ ಜಯಶೀಲರಾಗಿದ್ದಾರೆ. ಅವರಿಗೆ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಅಭಿನಂದನೆಗಳು.

19 ಡಿಸೆಂಬರ್ 2007 ಹಾಸನ ಜಿಲ್ಲಾ ಸ್ಕೌಟ್ ಗೈಡ್ ಸಂಸ್ಥೆಯ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆಯುವ ದಿನವಾಗಿ ಮಾರ್ಪಟ್ಟಿದ್ದು, ಚಳವಳಿಯ ಕಾರ್ಯಕರ್ತರಿಗೆಲ್ಲಾ ಬಹಳ ಹೆಮ್ಮೆ ಹಾಗೂ ಅಭಿಮಾನದ ವಿಷಯ.

ಸತತ ಎಂಟು ವರ್ಷಗಳ ಕಾಲ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳ ಅವಿರತಶ್ರಮ ಹಾಗೂ ಪ್ರಯತ್ನಗಳು ಹಾಗೂ ಜಿಲ್ಲಾ ಸಂಸ್ಥೆಯ ಸಮುದಾಯಭವನ ಕಟ್ಟಡ ಉಪಸಮಿಯ ಅಧ್ಯಕ್ಷರಾಗಿ ಕಾರ್ಯನಿರ್ವಸಿದ ಹಿಂದಿನ ಜಿಲ್ಲಾ ಕೋಶಾಧ್ಯಕ್ಷರೂ ಹಾಗೂ ಈಗಿನ ಜಿಲ್ಲಾ ಸ್ಕೌಟ್ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರ ಪರಿಶ್ರಮ ಶ್ಲಾಘನೀಯವಾದದ್ದು.

ಈ ಸಂದರ್ಭದಲ್ಲಿ ಮೇಲ್ಕಂಡ ಕಟ್ಟಡ ನಿರ್ಮಾಣಕ್ಕೆ ತಮಗೆ ಲಭ್ಯವಿದ್ದ ಸ್ಥಳೀಯ ಅಭಿವೃದ್ಧಿ ನಿಧಿಯಿಂದ ರೂ. 7.50 ಲಕ್ಷಗಳನ್ನು ನೀಡಿದ ಹಾಸನದ ಲೋಕಸಭಾ ಸದಸ್ಯರಾಗಿದ್ದ ದಿವಂಗತ ಶ್ರೀ ಜಿ. ಪುಟ್ಟಸ್ವಾಮಿಗೌಡರನ್ನು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗು ರಾಜ್ಯ ಸಂಸ್ಥೆಯು ಅತ್ಯಂತ ಗೌರವದಿಂದ ನೆನಯುತ್ತೇವೆ. ಈ ಸಂದರ್ಭದಲ್ಲಿ ಹಾಸನದ ಜಿಲ್ಲಾಧಿಕಾರಿಗಳಾಗಿ ಹಾಗು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸಿದ ಸರ್ಕಾರದ ಹಿರಿಯ ಅಧಿಕಾರಿಗಳ ನೆರವನ್ನು ಹೃತ್ಪೂರ್ವಕವಾಗಿ ಸ್ಮರಿಸುತ್ತೇನೆ. ಅದೇ ರೀತಿ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸಿದ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರುಗಳು, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಿಲ್ಲೆಯ ವಿವಿಧ ಶಿಕ್ಷಣ ಸಂಸ್ಥೆಗಳ ಪದಾಧಿಕಾರಿಗಳ ನೆರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಈ ಮಹತ್ ಕಾರ್ಯದಲ್ಲಿ ಸಾಕಷ್ಟು ಶ್ರಮವಹಿಸಿ ದುಡಿದ ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಕಾರ್ಯಕ್ರಮದ ವಿವರವಾದ ವರದಿಯನ್ನು ಸಂಚಿಕೆಯಲ್ಲಿ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.

ದಿನಾಂಕ 13-12-2007ರಂದು ಬೆಂಗಳೂರು ಉತ್ತರ ಜಿಲ್ಲೆಯ ಯಲಹಂಕ ಸ್ಥಳೀಯ ಸಂಸ್ಥೆ ಏರ್ಪಡಿಸಿದ್ದ ಸ್ಕೌಟ್ ಶತಮಾನೋತ್ಸವ ರ್‍ಯಾಲಿಯಲ್ಲಿ ಭಾಗವಹಿಸಿ ಧ್ವಜಾರೋಹಣ ಮಾಡಿ ಭಾಗವಹಿಸಿದ 500ಕ್ಕೂ ಹೆಚ್ಚಿನ ಕಬ್ಸ್ ಬುಲ್‌ಬುಲ್ ಸ್ಕೌಟ್ಸ್ - ಗೈಡ್ಸ್ ಹಾಗೂ ಎಲ್ಲಾ ಪದಾಧಿಕಾರಿಗಳಿಗೆ ಹಾಗೂ ರ್‍ಯಾಲಿ ಏರ್ಪಡಿಸಲು ಸಹಕರಿಸಿದ ಎಲ್ಲರಿಗೂ ಚಳವಳಿ ಬೆಳವಣಿಗೆಗೆ ಶ್ರಮಿಸಲು ಕೋರಿದ್ದೇನೆ.

ಜನವರಿ 11, 2008 ರಂದು ಬೆಳಿಗ್ಗೆ 10 ಘಂಟೆಗೆ ರಾಜ್ಯ ಯೋಜನಾ ಸಮಿತಿ ಸಭೆ ಹಾಗು ಮಧ್ಯಾಹ್ನ 2 ಘಂಟೆಗೆ ಜಿಲ್ಲಾ ಆಯುಕ್ತರುಗಳ ಹಾಗು ಕಾರ್ಯದರ್ಶಿಗಳ ಸಭೆ ಕರೆಯಲಾಗಿದೆ. ಜಿಲ್ಲಾ ಮುಖ್ಯ ಆಯುಕ್ತರುಗಳು, ಜಿಲ್ಲಾ ಸ್ಕೌಟ್ - ಗೈಡ್ ಆಯುಕ್ತರುಗಳು, ಜಿಲ್ಲಾ ಕಾರ್ಯದರ್ಶಿಗಳು ಹಾಗೂ ರಾಜ್ಯ ಸಹಾಯಕ ರಾಜ್ಯ ಆಯುಕ್ತರುಗಳು ಹಾಗು ರಾಜ್ಯ ಸ್ಥಾನಿಕ ಆಯುಕ್ತರುಗಳು ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಬೇಕಾಗಿ ಕೋರುತ್ತೇನೆ. 2008ರಲ್ಲಿ ಸ್ಕೌಟ್-ಗೈಡ್ ಚಳವಳಿಯನ್ನು ಹೆಚ್ಚು ಸಕ್ರಿಯಗೊಳಿಸುವತ್ತ ನಾವೆಲ್ಲಾ ಕಾರ್ಯಪ್ರವತ್ತರಾಗೋಣ ಎಂದು ಆಶಿಸುತ್ತಾ, ನಮಗೆಲ್ಲಾ ದಯಾಮಯನಾದ ಭಗವಂತನು ಶುಭಾಶೀರ್ವಾದಗಳು ಸದಾ ಇರಲೆಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# HEARTY CONGRATULATIONS



## *Sri Rameshwar Thakur*

***His Excellency The Govenor of Karnataka***
***President, Bharat Scouts & Guides, India***
***Patron, Bharat Scouts & Guides, Karnataka***

*Sri RAMESHWAR THAKUR, His Excellency the Governor of Karnataka has been unanimosly re-elected as President of the Bharat Scouts & Guides, India at the National Council Meeting held at National Headquarters, New Delhi on 28 November 2007.*

*He is Closely connected with the Scout / Guide Movement Since 1942. He has worked as Scout Master, District Organising Commissioner and Assistant Provincial Organizing Commissioner for a Number of years in West Bengal and East Bengal.*

*He is holding this distinguished post of Presidentship of Bharat Scouts & Guides, India for the Third Consecutive Term.*

*As a disciplined and distinguished Scout Leader, he is responsible for organising the Rashtrapathi Scouts & Guides Rally and Presentation of National Awards function held on 11 July 2007 at Ashoka Hall of Rashtrapathi Bhavan, New Delhi. The Then President of India, Bharataratna Dr. APJ Abdul Kalam, Presented the Awards & Certificates to more than 195 participants who had come from all over the Country.*

*We pray God Almighty to give His Excellency Shri Rameshwar Thakurji, the required strength to carry the Mantle of the Movement to better heights in future.*

*The Bharat Scouts & Guides, Karnataka conveys its Heartly Congratulations on his Unanimous re-election as President of Bharat Scouts & Guides, India.*

# HEARTY CONGRATULATIONS



***Sri Lalit Mohan Jain,** IAS (Retd)*
***National Commissioner, Bharat Scouts & Guides, India***

*Sri Lalit Mohan Jain, IAS (Retd.) is re-elected as National Commissioner of Bharat Scouts & Guides, India at the National Council Meeting held at National Headquarters, New Delhi on 28 November 2007.*

*He is occupying the Coveted post of National Commissioner of Bharat Scouts & Guides, India for the fifth term in succession.*

*He has earlier served as State Chief-Commissioner of Haryana State and also functioned as International Commissioner (Scouts) Bharat Scouts & Guides, India. He is a member of the Asia Pacific Regional Scout Committee and serving the Scout/ Guide Movement at different levels for number of decades.*

*The Bharat Scouts & Guides, Karnataka conveys it's Heartly Congratulations to Sri LM Jain on his re-election as National Commissioner of the Bharat Scouts & Guides, India and Pray God Almighty to give him the required strength to carry on the message of the Largerst Uniformed International Youth Movement to more number of Young Boys and Girls in our Country.*

# HEARTY CONGRATULATIONS



***Smt. Geetha Nataraj,*** *LT(G)*
*Joint State Secretary (G)*
*Bharat Scouts and Guides, Karnataka*
*Member, National Executive Committee,*
*Bharat Scouts and Guides, India.*

*Smt. Geetha Nataraj, LT(G), Joint State Secretary (G) Bharat Scouts and Guides, Karnataka has been elected as Member of the National Executive Committee of the Bharat Scouts and Guides, India at the National Council meeting held at National Headquarters, New Delhi on 28th November 2007.*

*Smt. Geetha Nataraj has been involved in the movement at different levels- as District Commissioner (G) Kolar South District and Bangalore North District and Assistant State Commissioner (G), Bangalore Division & presently working as Joint State Secretary (G) for the Second time.*

*She has been awarded the Distinguished National Award of "**Bar to Silver Star**" at the Awards Ceremony held at Ashoka Hall, Rashtrapathi Bhavan, New Delhi on 11th July 2007 from **Bharat Ratna Dr. APJ Abdul Kalamji**, the then President of India.*

*She has also received the distinguished Asia Pacific Adult Leaders Achievement Award from WAGGGS (World Association of Girl Guides & Girl Scouts), World Bureau, London. She is also a Member of "**Friends of Asia Pacific Region**" of WAGGGS.*

*Bharat Scouts & Guides, Karnataka conveys its Hearty Congratulations to Smt. Geetha Nataraj for the opportunity to serve as a member of the National Executive Committee of Bharat Scouts and Guides, India and Pray God Almighty to bless her to succeed in this role.*




# ಜೀವ ಕಾರುಣ್ಯ

ಗೊ.ರು. ಚನ್ನಬಸಪ್ಪ

ಹಸಿವು, ಬಾಯಾರಿಕೆ, ನಿದ್ದೆ, ಮುಖ್ಯವಾಗಿ ಉಸಿರಾಟ ಇವು ಜೀವಿಯ ಸಹಜ ಲಕ್ಷಣಗಳು ಮತ್ತು ಅಗತ್ಯಗಳು. ಈ ಅಗತ್ಯಗಳ ಪೂರೈಕೆಗಾಗಿ ನಡೆಸುವ ಪ್ರಯತ್ನ, ಪಡುವ ಶ್ರಮ ಮತ್ತು ಪಡೆಯುವ ತೃಪ್ತಿ - ಇದೇ ಜೀವನ. ಇದಿಷ್ಟೇ ಆಗಿದ್ದರೆ ಜೀವನದಲ್ಲಿ ಯಾವ ಸಮಸ್ಯೆಗಳೂ ಇರುತ್ತಿರಲಿಲ್ಲ. ಆದರೆ ಈ ಸಹಜ ಲಕ್ಷಣಗಳ ಜೊತೆಗೆ ಕೆಲವು ಸ್ವಭಾವಗಳೂ ಸೇರಿಕೊಂಡು ನೋವಿನ ಸಮಸ್ಯೆಯನ್ನೋ, ನಲಿವಿನ ಸಂತೃಪ್ತಿಯನ್ನೋ ಜೀವಿ ಅನುಭವಿಸುವುದನ್ನು ಕಾಣುತ್ತೇವೆ.

ಹಸಿವಾದ ಕೂಡಲೇ ಅನ್ನ, ಬಾಯಾರಿದ ಕೂಡಲೇ ನೀರು, ಮಲಗಿದ ಕೂಡಲೇ ನಿದ್ದೆ ಬರುವಂತಿದ್ದರೆ, ಉಸಿರಾಟ ನಿರಾತಂಕವಾಗಿ ನಡೆಯುವಂತಿದ್ದರೆ ಆ ಮಾತು ಬೇರೆ. ಆದರೆ ಸೃಷ್ಟಿಯ ನಿಯಮ ಹಾಗಿದ್ದಂತಿಲ್ಲ. ಅನ್ನ ಬೇಕೆಂದರೆ ದುಡಿದು ತಿನ್ನಬೇಕು;ನೀರು ಬೇಕೆಂದರೆ ತಂದು ಕುಡಿಯಬೇಕು. ನಿದ್ದೆ ಬೇಕೆಂದರೆ ದೇಹ ದಣಿದಿರಬೇಕು. ಹೀಗೆ ಹಸಿವು, ನೀರಡಿಕೆ, ದುಡಿಮೆ, ನಿದ್ದೆ, ಎಚ್ಚರ ಇವುಗಳೊಂದಿಗೆ ಜೀವಿಯ ಬದುಕು ನಡೆಯುತ್ತಿರಬೇಕು ಎಂಬುದೇ ಸೃಷ್ಟಿಯ ನಿಯಮವಿದ್ದಂತೆ ಕಾಣುತ್ತದೆ.

ಜೀವಿಯ ಸಹಜ ಲಕ್ಷಣಗಳಲ್ಲಿ ಅನುಭವ ಮತ್ತು ಅಗತ್ಯಗಳ ಪೂರೈಕೆಗೆ ಪ್ರೇರಣೆ ನೀಡುವ ಮನಸ್ಸೊಂದಿದೆ. ಆ ಮನಸ್ಸು ಅನೇಕ ಭಾವಗಳ ಜನ್ಮಕೇಂದ್ರ. ಈ ಭಾವಗಳೇ ಸ್ಥೂಲವಾಗಿ ಸ್ವಭಾವಗಳೆನಿಸುತ್ತವೆ. ಇವುಗಳ ಪಟ್ಟಿ ಬಹಳ ದೊಡ್ಡದು. ಆಸೆ - ಅಂಜಿಕೆ, ಅಸೂಯೆ-ಅನೃತ, ಅಳು-ನಗೆ, ಪ್ರೇಮ-ಕಾಮ, ಚಟ-ಹಠ, ಕ್ರೋಧ, ಭೇದ, ಆಸಕ್ತಿ-ನಿರಾಸಕ್ತಿ, ಧೈರ್ಯ-ದುಗುಡ, ಸಂಕಟ-ಸಂತೋಷ, ಪ್ರಾಬಲ್ಯ-ದೌರ್ಬಲ್ಯ, ಪ್ರೀತಿ-ದ್ವೇಷ, ಅಹಂಕಾರ-ವಿನಯ, ಕ್ರೌರ್ಯ-ಕಾರುಣ್ಯ, ಹೀಗೆ ಪಟ್ಟಿ ಮಾಡುತ್ತಾ ಹೋಗಬಹುದು.

ಜೀವಿಯ ಒಂದು ಸ್ವಭಾವವನ್ನು ಕುರಿತಂತೆ ಒಂದು ಪ್ರಸಂಗವನ್ನು ಇಲ್ಲಿ ಪ್ರಸ್ತಾಪಿಸಬಯಸುತ್ತೇನೆ. ಅದು ಜೀವಕಾರುಣ್ಯಕ್ಕೆ ಸಂಬಂಧಿಸಿದ್ದು. ನಮ್ಮಲ್ಲಿ ಕ್ರೌರ್ಯವೂ ಇದೆ; ಕಾರುಣ್ಯವೂ ಇದೆ. ಇವುಗಳಲ್ಲಿ ಯಾವುದು ನಮಗೆ ನೆಮ್ಮದಿಕೊಡುತ್ತದೆ ಎನ್ನುವುದು ಮುಖ್ಯ.

ಎರಡನೆಯ ಮಹಾಯುದ್ಧದ ಸಂದರ್ಭ. ರಷ್ಯಾದ ಸಹಸ್ರಾರು ಜನ ಪ್ರಾಣತೆತ್ತ ಭೀಕರ ಯುದ್ಧ ಅದು. ಆಗ ಅಲ್ಲಿನ ಯುವಕನೊಬ್ಬನಿಗೆ ಯುದ್ಧದ ಕರೆ ಬಂತು. ದೇಶ ದೃಷ್ಟಿಯಿಂದ ಯುದ್ಧಕ್ಕೆ ಹೋಗಬೇಕು. ಆದರೆ ಆ ಯುವಕನಿಗೆ ತೊಂದರೆ ಎಂದರೆ ಮನೆಯಲ್ಲಿ ಬಡತನ. ತಾಯಿ ಮತ್ತು ತಂಗಿ ಇದ್ದಾರೆ. ಅವರ ಜೀವನ ನಿರ್ವಹಣೆಗೆ ಏನಾದರೂ ವ್ಯವಸ್ಥೆ ಮಾಡಬೇಕಾಗಿತ್ತು. ತಾನು ಯುದ್ಧಕ್ಕೆ ಹೋದರೆ ಅವರ ಗತಿ ಏನೆಂಬ ಚಿಂತೆ ಆ ಯುವಕನಿಗೆ; ಬಹಳ ಯೋಚನೆ ಮಾಡಿದ. ಅನ್ಯಮಾರ್ಗವಿಲ್ಲದೆ, ತಾನು ಅತ್ಯಂತ ಪ್ರೀತಿಯಿಂದ ಸಾಕಿದ್ದ ಒಂದು ಹಸುವನ್ನು ಮಾರಲು ನಿರ್ಧರಿಸಿದ.

ತಂಗಿಯೊಡನೆ ಹಸುವನ್ನು ಪೇಟೆಗೆ ಕೊಂಡೊಯ್ದು. ತುಂಬ ದಷ್ಟಪುಷ್ಟವಾಗಿದ್ದ ಹಸು. ಕೊಳ್ಳುವವರು ತಾನು ಮೇಲು, ತಾನು ಮೇಲೆಂದು ಅದಕ್ಕೆ ಬೆಲೆ ಹೆಚ್ಚಿಸಿದರು. ಕೊನೆಯಲ್ಲಿ ಒಬ್ಬ ಅತ್ಯಂತ ಹೆಚ್ಚಿನ ಬೆಲೆ ಕೂಗಿ 3500 ರೂಬೆಲ್ ಹಣವನ್ನು ಆ ಯುವಕನ ಜೇಬಿಗೆ ತುರುಕಿದ. ಹಸುವಿನ ಬಗೆಗಿದ್ದ ಪ್ರೀತಿಯಿಂದಾಗಿ ಅದನ್ನು ಮಾರಲಾಗದೆ

ಯುವಕನ ಮನ ಹೊಯ್ದಾಡುತ್ತಿತ್ತು. ಅವನ ಸ್ನೇಹಿತನೊಬ್ಬ 'ಒಂದು ಹಸುವಿಗೆ ಇಷ್ಟೊಂದು ಹಣವನ್ನು ಯಾರು ಕೊಟ್ಟಾರು? ನಿನ್ನ ಅದೃಷ್ಟ. ಸುಮ್ಮನೆ ಹಣ ಇಟ್ಟುಕೊಂಡು ಹಸುವನ್ನು ಕೊಟ್ಟುಬಿಡು' ಎಂದ. ಅಷ್ಟರಲ್ಲಿ ಅವನ ಜೇಬಿನಲ್ಲಿ ಹಣವಿಟ್ಟಾತ ತನ್ನ ಸ್ನೇಹಿತನೊಂದಿಗೆ ಮಾತನಾಡುತ್ತಾ 'ಇದು ಐವತ್ತು ಜನಕ್ಕೆ ಆದೀತಲ್ಲವೇ?' ಎಂದು ಕೇಳಿದ ಮಾತು ಈ ಯುವಕನ ಕಿವಿಗೆ ಬಿತ್ತು.

ಕೂಡಲೇ, ಅತ್ತ ತಿರುಗಿ, ಅವನನ್ನು ಕುರಿತು 'ನೀನು ಈ ಹಸುವನ್ನು ಏಕೆ ಕೊಳ್ಳುತ್ತಿರುವೆ?' ಎಂದು ಕೇಳಿದ. ಆದಕೆ ಅವನು 'ಮತ್ತಿನ್ನೇತಕ್ಕೆ? ಕಡಿಯಲಿಕ್ಕೆ, ತಿನ್ನಲಿಕ್ಕೆ' ಎಂದ. ಯುವಕನ ಮನಸ್ಸು ದೃಢವಾಯಿತು. ತಾನು ಪ್ರೀತಿಯಿಂದ ಸಾಕಿದ್ದ ಹಸುವನ್ನು ತನ್ನ ಸ್ವಾರ್ಥಕ್ಕಾಗಿ ಕಟುಕರಿಗೆ ಕೊಡುವುದೆ? ಎನಿಸಿತು. ತಕ್ಷಣ ತನ್ನ ಜೇಬಿನಲ್ಲಿದ್ದ ಹಣವನ್ನು ಕೊಟ್ಟವನಿಗೆ ಹಿಂತಿರುಗಿಸಿ, 'ಇಲ್ಲ, ನಾನು ಈ ಹಸುವನ್ನು ಮಾರುವುದಿಲ್ಲ' ಎಂದು ಹೇಳುತ್ತ ತನ್ನ ತಂಗಿಯೊಡನೆ ಹಸುವಿನೊಂದಿಗೆ ಮನೆಗೆ ಹಿಂತಿರುಗಿದ.

ರಷ್ಯಾದಲ್ಲಿ ಮಾಂಸಾಹಾರ ನಿಷೇಧವೇನಲ್ಲ. ಹಸುಗಳನ್ನು ಕೊಲ್ಲವುದು ಅಪರಾಧವೇನಲ್ಲ. ಆದರೆ ಜೀವಕಾರುಣ್ಯ ಎನ್ನುವುದು ಬಹು ದೊಡ್ಡದು. ಆ ಸ್ವಭಾವ ಆ ಯುವಕನಲ್ಲಿ ಗರಿಗೆದರಿ ನಿಂತಿತ್ತು. ಈ ಅಮಾಯಕ ಸಾಧು ಜೀವಿಯನ್ನು ಕೊಲ್ಲಿಸಲಾರೆ ಎಂಬ ಸಂಕಲ್ಪ ಮಾಡಿತ್ತು.

ಈ ಜೀವಕಾರುಣ್ಯ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಇರಬೇಕು. ಕ್ರೌರ್ಯದ ಫಲ ಹಿಂಸೆ. ಹಿಂಸೆಯ ಪರಿಣಾಮ ನೋವು, ಸಾವು; ದುಃಖ. ಕಾರುಣ್ಯದ ಫಲ ಜೀವರಕ್ಷಣೆ, ಸಮಾಧಾನ; ನೆಮ್ಮದಿ, ಕ್ರೌರ್ಯ-ಕಾರುಣ್ಯ ಎರಡೂ ಜೀವಿಯ ಸ್ವಭಾವಗಳಾದರೂ ನಾವು ಕ್ರೌರ್ಯವನ್ನು ಕಾಲಲ್ಲಿ ತುಳಿದು, ಕಾರುಣ್ಯವನ್ನು ಕೈ ಹಿಡಿದು ನಡೆಯಬೇಕು. ಅದು ಕೊಡುವ ತೃಪ್ತಿ, ನೆಮ್ಮದಿ ಅನಿರ್ವಚನೀಯ.

+

## ಕೊಂಡಜ್ಜಿ ಬಸಪ್ಪ ಸಂಸ್ಮರಣೆ

*ಸ್ಮರಿಸೋಣ ಬನ್ನಿ ಕನ್ನಡದ ನಾಡ ಕೊಂಡಜ್ಜಿ ಬಸಪ್ಪರನ್ನ*
*ಕೊಂಡಜ್ಜಿ ಕೂಡ ನಂದನವ ಮಾಡಿ ಕೈಲಾಸ ಕಂಡರನ್ನ ॥೧॥*

*ನಮಿಸೋಣ ಬನ್ನಿ ಕರುನಾಡ ಪುತ್ರ ಕೊಂಡಜ್ಜಿ ಬಸಪ್ಪರನ್ನ*
*ತನುಮನವನಿತ್ತ ಧನಧಾನ್ಯ ತಂದ ಧೀಮಂತ ಧೀರನನ್ನ ॥೨॥*

*ಕೊಂಡಜ್ಜಿ ಶಾಂತಿ ಬೆಸೆಂಟತೋಟ ಶಿಬಿರ ಕೇಂದ್ರಗಳನು*
*ಸಮೃದ್ಧಿಯಾಗಿ ಬೆಳಸಿದ ಕಾರುಣ್ಯ ನಿಧಿಯನು ॥೩॥*

*ನೆನೆಯೋಣ ಬನ್ನಿ ಭಾರತದ ಸತ್ಪುತ್ರ ಸಮಾಜ ಸೇವಕನನು*
*ಮೆರೆಸೋಣ ಭಾರತ ಸ್ಕೌಟ್ ಗೈಡ್ ಬಾವುಟವ ಬಸಪ್ಪ ಪ್ರಾಣವನ್ನ ॥೪॥*

*ರಚನೆ :* ***ಕು॥ ಪ್ರೇಮಾ ಜೆ.*** *ಮಂಗಳೂರು, ಬನವಾಸಿ*

**ದಿನಾಂಕ : 14.11.2007 ರಂದು ಕೊಂಡಜ್ಜಿಯಲ್ಲಿ ಜರುಗಿದ ಕೊಂಡಜ್ಜಿ ಬಸಪ್ಪ ಸ್ಮರಣೆ ದಿನದಂದು ರಚಿಸಿದ ಕವಿತೆ**



# ಜಿಲ್ಲಾ ವಾರ್ತೆ

## ಶಿವಮೊಗ್ಗ ಜಿಲ್ಲೆ

ಸ್ಕೌಟ್ಸ್-ಗೈಡ್ಸ್ ಶತಮಾನೋತ್ಸವ ಮತ್ತು ಮಕ್ಕಳ ದಿನಾಚರಣೆ ಪ್ರಯುಕ್ತ ತಾರಾಮಂಡಲ ಮತ್ತು ಸಿರಿಗನ್ನಡ ಪ್ರತಿಭಾನ್ವೇಷಣಾ ಪರೀಕ್ಷಾ ಸಮಾರಂಭವನ್ನು ಕೊಪ್ಪದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ದಿನಾಂಕ 14-11-2007ರಂದು ನೆರವೇರಿಸಲಾಯಿತು. ಚಿತ್ರದುರ್ಗ ಪ್ರಕಾಶನದವರು ಆಯೋಜಿಸಿದ್ದ ಈ ಪರೀಕ್ಷೆಯನ್ನು ಲಯನ್ಸ್ ಮತ್ತು ಲಯನೆಸ್ ಸಂಸ್ಥೆ, ವಾಚರ್ ಟ್ಯಾಂಕ್, ಆಟೋ ಮಾಲೀಕರು ಮತ್ತು ಚಾಲಕರ ಸಂಘ ಕನ್ನಡಾಂಬ ಬೇಕರಿಯ ಮಾಲೀಕರಾದ ಶ್ರೀಯುತ ಭಾಸ್ಕರ್, ಶ್ರೀನಿಧಿ ಟೆಕ್ಸ್‌ಟೈಲ್ಸ್‌ನ ಮಾಲೀಕರಾದ ಶ್ರೀಯುತ ಮೋಹನ್, ಪಟ್ಟಣ ಪಂಚಾಯ್ತಿ ಮಾಜಿ ಅಧ್ಯಕ್ಷರಾದ ಶ್ರೀಯುತ ಪ್ರಕಾಶ್‌ರವರ ಸಹಕಾರದೊಂದಿಗೆ ನಡೆಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲಾ ಮುಖ್ಯ ಶಿಕ್ಷಕರಾದ ಶ್ರೀಮತಿ ಸುಮಿತ್ರಮ್ಮನವರು ವಹಿಸಿದ್ದು, ಉದ್ಘಾಟನೆಯನ್ನು ಲಯನೆಸ್ ಸಂಸ್ಥೆಯ ಅಧ್ಯಕ್ಷಿಣಿ ಶ್ರೀಮತಿ ಸುಚಿತ್ರಾ ಪ್ರಸನ್ನ ಕುಮಾರ್ ನೆರವೇರಿಸಿದರು. ಲಯನೆಸ್ ಸಂಸ್ಥೆಯ ಸದಸ್ಯರಾದ ಶ್ರೀಮತಿ ಸಬಿತಾ ತಾರಾನಾಥ್‌ರವರು ಪ್ರಶ್ನೆ ಪತ್ರಿಕೆ ಬಿಡುಗಡೆ ಮಾಡಿದರು. ಎಸ್.ಡಿ.ಎಂ.ಸಿ. ಸದಸ್ಯರಾದ ಶ್ರೀಮತಿ ಪ್ರೇಮಾ ಪ್ರಕಾಶ್‌ರವರು ಹಾಗೂ ಪತ್ರಕರ್ತರಾದ ಶ್ರೀಯುತ ಜಲಂಧರ್‌ರವರು ಉಪಸ್ಥಿತರಿದ್ದರು. ಬುಲ್‌ಬುಲ್ ಶಿಕ್ಷಕಿಯಾದ ಶ್ರೀಮತಿ ಎಂ.ಪಿ. ಸತ್ಯಭಾಮ ಕಾರ್ಯಕ್ರಮ ನಿರೂಪಿಸಿ, ಶಿಕ್ಷಕಿ ಸರಸ್ವತಿಯವರು ಸ್ವಾಗತಿಸಿ ದೈಹಿಕ ಶಿಕ್ಷಕರಾದ ಶ್ರೀಯುತ ಸತ್ಯಮೂರ್ತಿಯವರು ವಂದಿಸಿದರು. ಲಯನೆಸ್ ವತಿಯಿಂದ ಆಟೋಟ ಸ್ಪರ್ಧೆ ಏರ್ಪಡಿಸಿ ಬಹುಮಾನ ವಿತರಣೆ ಮಾಡಲಾಯಿತು. ಪರೀಕ್ಷೆಯಲ್ಲಿ ಬುಲ್‌ಬುಲ್, ಗೈಡ್ಸ್ ಅಲ್ಲದೆ ಶಾಲಾ ಮಕ್ಕಳೂ ಸೇರಿ ಒಟ್ಟು 67 ಮಕ್ಕಳು ಭಾಗವಹಿಸಿದ್ದರು.

## ಚಿಕ್ಕಮಗಳೂರು

**ಸ್ಕೌಟ್ಸ್ ಮತ್ತು ಗೈಡ್ಸ್ ಹೊರ ಸಂಚಾರ :** ಸ್ಕೌಟ್ಸ್ ಮತ್ತು ಗೈಡ್ಸ್ "ಪ್ರಕೃತಿ ಪ್ರೇಮಿ ಮತ್ತು ಪ್ರಾಣಿಮಿತ್ರ" ಎಂಬ ನಿಯಮವನ್ನು ಆಧಾರವಾಗಿಟ್ಟುಕೊಂಡು ನಿಯಮದ ಅರ್ಥವನ್ನು ಸ್ಕೌಟ್ಸ್, ಗೈಡ್‌ಗಳಿಗೆ ಪ್ರಾಯೋಗಿಕವಾಗಿ ತಿಳಿಸುವ ಸಲುವಾಗಿ ದಿನಾಂಕ 3-11-2007ರಂದು ಚಿಕ್ಕಮಗಳೂರಿನಿಂದ 5 ಕಿ.ಮೀ. ದೂರವಿರುವ ಇಂದಾವರದ ಛತ್ರಿಮರಕ್ಕೆ ಕಾಲುನಡಿಗೆಯಲ್ಲಿ ಹೊರಸಂಚಾರ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ತಾಲ್ಲೂಕಿನ ವಿವಿಧ ಶಾಲೆಗಳಿಂದ ಒಟ್ಟು 450 ಸ್ಕೌಟ್ಸ್, ಗೈಡ್ಸ್‌ಗಳು ಭಾಗವಹಿಸಿದ್ದರು.

ಸ್ಕೌಟ್ಸ್, ಗೈಡ್ಸ್‌ಗಳಿಗೆ ಪ್ರತ್ಯೇಕವಾಗಿ ವನವಿದ್ಯಾ ಸಂಕೇತಗಳ ಬಳಕೆ ವೈಡ್ ಗೇಮ್ಸ್, ಸ್ಕೌಟ್, ಗೈಡ್ ಕೌಶಲಗಳು ಮತ್ತು ಛತ್ರಿ ಮರದ ಆವರಣದ ಸ್ವಚ್ಛತೆ ಮುಂತಾದವುಗಳನ್ನು ಚಟುವಟಿಕೆ ಮೂಲಕ ತಿಳಿಸಲಾಯಿತು. ನಂತರ 3 ಘಂಟೆಯಿಂದ ಒಂದು ಘಂಟೆ ಕಾಲ ಪ್ರಕೃತಿ ಪರಿಚಯದ ಬಗ್ಗೆ ಜಿಲ್ಲಾ ಕಾರ್ಯದರ್ಶಿ ಶ್ರೀ ಡಿ.ವಿ. ಗಿರೀಶ್‌ರವರು ತಿಳಿಸಿದರು.

ಈ ಕಾರ್ಯಕ್ರಮದಲ್ಲಿ ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಸಂಧ್ಯಾರಾಣಿ, ತಾಲ್ಲೂಕು ಕಾರ್ಯದರ್ಶಿ ಶ್ರೀ ನೀಲಕಂಠಚಾರ್ಯ, ರಾಜ್ಯ ಸಮಿತಿಯ ಸದಸ್ಯರಾದ ಶ್ರೀ ಸಿ.ಇ. ಮಂಜುನಾಥ್‌ರವರು ಭಾಗವಹಿಸಿದ್ದರು.

## ಮಂಡ್ಯ ಜಿಲ್ಲೆ

ದಿನಾಂಕ 31-10-2007ರಂದು ಬೆಳಿಗ್ಗೆ 10.30 ಗಂಟೆಗೆ ಮಂಡ್ಯ ಜಿಲ್ಲಾಧಿಕಾರಿಗಳ ಕಛೇರಿ ಮುಂಭಾಗದಲ್ಲಿ ಏರ್ಪಡಿಸಿದ್ದ ರಾಷ್ಟ್ರೀಯ ಸಂಕಲ್ಪ ದಿನಾಚರಣೆ

ಕಾರ್ಯಕ್ರಮದಲ್ಲಿ ಶ್ರೀ ಸ್ಯಾಮುಯಲ್ ಸತ್ಯಕುಮಾರ್ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಮಂಡ್ಯ, ಶ್ರೀಮತಿ ಬಿ.ಜಿ. ಉಮಾ, ಜಿಲ್ಲಾ ಜಂಟಿ ಕಾರ್ಯದರ್ಶಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಮಂಡ್ಯ, ಶ್ರೀ ಶಿವಚಿದಂಬರ್, ಕಾರ್ಯದರ್ಶಿಗಳು ಮಂಡ್ಯ ದಕ್ಷಿಣ ವಲಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಂಡ್ಯ ತಾಲ್ಲೂಕು ಇವರುಗಳು ಹಾಗೂ ಸ್ಕೌಟರ್, ಗೈಡರ್‌ಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮ ಮಂಡ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು.

ದಿನಾಂಕ 1-11-2007ರಂದು ಮಂಡ್ಯ ಜಿಲ್ಲಾ ಸ್ಟೇಡಿಯಂನಲ್ಲಿ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವದ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಿದ್ದ ಪಥಚಲನೆಯಲ್ಲಿ ಉತ್ತಮ ಪ್ರದರ್ಶನ ನೀಡಿದರು. ಇದೇ ದಿನ ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಜಿಲ್ಲಾ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

ಕೆ.ಆರ್. ಪೇಟೆ ಅಶೀರ್ವಾದ್ ಹಿರಿಯ ಪ್ರಾಥಮಿಕ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕಬ್ಸ್ ಮತ್ತು ಬುಲ್‌ಬುಲ್‌ಗಳು ಹಾಗೂ ಇನ್‌ಫೆಂಟ್ ಜೀಸಸ್ ಕಾಟೇಜ್‌ಶಾಲೆ ಕೆ.ಆರ್. ಪೇಟೆ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್‌ಗಳು ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್, ಕಬ್ ಮಾಸ್ಟರ್ ಹಾಗೂ ಫ್ಲಾಕ್ ಲೀಡರ್‌ಗಳು ಕೆ.ಆರ್. ಪೇಟೆಯಲ್ಲಿ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿ ಪಥಚಲನದಲ್ಲಿ ಉತ್ತಮ ಪ್ರದರ್ಶನ ನೀಡಿದ್ದರು. ಅಲ್ಲದೆ ಅದೇ ದಿನ ಸ್ಕೌಟ್ ಗೈಡ್ ಶತಮಾನೋತ್ಸವದ ಅಂಗವಾಗಿ ಸ್ವಚ್ಛತಾ ಕಾರ್ಯಕ್ರಮವನ್ನು ನಡೆಸಿದರು.

ದಿನಾಂಕ 16-11-2007 ರಂದು ಮಂಡ್ಯ ತಾಲ್ಲೂಕು ದಕ್ಷಿಣ ವಲಯದ ಸ್ಥಳೀಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಆಶ್ರಯದಲ್ಲಿ ಜಿಲ್ಲಾ ಮಟ್ಟದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶವನ್ನು ಏರ್ಪಡಿಸಲಾಗಿತ್ತು. ಈ ಸಮಾವೇಶದ ಏರ್ಪಾಟನ್ನು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಎಸ್. ಶಿವಚಿದಂಬರ್‌ರವರು ಮಾಡಿದ್ದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರಾಮೇಗೌಡರವರು, ಜಿಲ್ಲಾ ತರಬೇತಿ ಸ್ಕೌಟ್ಸ್ ಆಯುಕ್ತರಾದ ಶ್ರೀ ಡಿ. ಸ್ಯಾಮುಯಲ್ ಸತ್ಯಕುಮಾರ್‌ರವರು ಗೈಡ್ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಎನ್. ಜಯಲಕ್ಷ್ಮೀಗೌಡರವರು ಹಾಗೂ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ ವಿಭಾಗದ ಎಲ್ಲಾ ವೃಕ್ಷಮಣಿಧಾರಕರು ಭಾಗವಹಿಸಿದ್ದರು.

ದಿನಾಂಕ 24-11-2007 ಮತ್ತು 25-11-2007ರಂದು ಮಂಡ್ಯದ ನಗರದಲ್ಲಿ ರೈತ ಸಭಾಂಗಣದ ಆವರಣದಲ್ಲಿ ಏರ್ಪಡಿಸಿದ್ದ ಮಹಿಳಾ ಲೇಖಕಿಯರ ಸಮ್ಮೇಳನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸ್ವಯಂ ಸೇವಕರಾಗಿ ಭಾಗವಹಿಸಿದ್ದರು.

## ಬೀದರ್ ಜಿಲ್ಲೆ

ಬೀದರ್ ಸ್ಥಳೀಯ ಸಂಸ್ಥೆ ಹಾಗೂ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ **ಗುರುನಾನಕ ದೇವ ಪಬ್ಲಿಕ್ ಶಾಲೆಯಲ್ಲಿ** ಸ್ಕೌಟಿಂಗ್ ಶತಮಾನೋತ್ಸವದ ಅಂಗವಾಗಿ ನಗರದ ಝಿರಾ ಕಲ್ಯಾಣ ಮಂಟಪದಲ್ಲಿ ದಿನಾಂಕ 2-11-2007 ರಿಂದ 4-11-2007ರ ವರೆಗೆ ಸ್ಕೌಟಿಂಗ್ ಶತಮಾನೋತ್ಸವ ಹಾಗೂ ದ್ವಿತೀಯ ಸೋಪಾನ ಶಿಬಿರ ನಡೆಯಿತು. ಈ ಶಿಬಿರದಲ್ಲಿ ಜಿಲ್ಲೆಯಿಂದ 258 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು 15 ಸ್ಕೌಟರ್ಸ್, 8 ಗೈಡರ್ಸ್, 8 ರೇಂಜರ್ಸ್, 9 ರೋವರ್ಸ್‌ಗಳು ಭಾಗವಹಿಸಿದ್ದರು,

ಶಿಬಿರ ನಾಯಕರಾಗಿ ಸ್ಕೌಟ್ಸ್ ವಿಭಾಗಕ್ಕೆ ಶ್ರೀ ಬಾಬುರಾವ್ ನಿಂಬೂರೆ ಹಾಗೂ ಗೈಡ್ ವಿಭಾಗಕ್ಕೆ ಶ್ರೀಮತಿ ಸುಸಾನಾ ಆಗಮಿಸಿದ್ದರು.

ಸಮಾರೋಪ ಸಮಾರಂಭ ಹಾಗೂ ಸ್ಥಳೀಯ ಸಂಸ್ಥೆಯ ಸಂಸ್ಥೆ ಬೀದರ್‌ನ ಶತಮಾನೋತ್ಸವ ಸಮಾರಂಭ ದಿನಾಂಕ 4-11-2007 ರಂದು ನಡೆಯಿತು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಉಪನಿರ್ದೇಶಕರಾದ ಶ್ರೀ ಎಂ. ದೇವಾನಂದ ಆಗಮಿಸಿದರು. ಹಾಗೂ ಅಧ್ಯಕ್ಷತೆಯನ್ನು ಶ್ರೀಮತಿ ರೇಷ್ಮಾ ಬಲಬೀರಸಿಂಗ್ ವಹಿಸಿದರೆ ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖ ಮುಸ್ತಾಕ ಅಲಿ ಭಾಗವಹಿಸಿದ್ದರು. ಉಪನಿರ್ದೇಶಕರು ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜ ಬಿಡುಗಡೆ ಮಾಡಿದರು.

## ತುಮಕೂರು ಜಿಲ್ಲೆ

ಸ್ಕೌಟ್ಸ್ ಶತಮಾನೋತ್ಸದ ವರ್ಷಾಚರಣೆ ಪ್ರಯುಕ್ತ ಸ್ಕೌಟ್ಸ್ ಗೈಡ್ಸ್ ಭಾವೈಕ್ಯತಾ ಶಿಬಿರವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತುಮಕೂರು ಜಿಲ್ಲಾ ಸಂಸ್ಥೆ ವತಿಯಿಂದ ದಿನಾಂಕ 2-12-2007 ರಂದು ಸ್ಕೌಟ್ ಭವನದ ಆವರಣ ತುಮಕೂರು ಇಲ್ಲಿ ಏರ್ಪಡಿಸಲಾಗಿತ್ತು.

ಶಿಬಿರದಲ್ಲಿ 450 ಸ್ಕೌಟ್ಸ್, ಗೈಡ್ಸ್, ಕಬ್, ಬುಲ್‌ಬುಲ್‌ಗಳು ಮತ್ತು ಶಿಕ್ಷಕರು ಭಾಗವಹಿಸಿದ್ದು. ಕಾರ್ಯಕ್ರಮ ಬೆಳಿಗ್ಗೆ 10.00 ಗಂಟೆಗೆ ಧ್ವಜಾರೋಹಣದೊಂದಿಗೆ ಪ್ರಾರಂಭವಾಗಿ ಸಂಜೆ 4.30ಕ್ಕೆ ಧ್ವಜ ಆವರೋಹಣದೊಂದಿಗೆ ಮುಕ್ತಾಯವಾಯಿತು.

ಶಿಬಿರದಲ್ಲಿ ವಿವಿಧ ಸಂಸ್ಕೃತಿಯ ವೇಶಭೂಷಣಗಳು, ಹಬ್ಬಗಳ ಆಚರಣೆ ಸಾಂಸ್ಕೃತಿಕ ಸ್ಪರ್ಧೆಗಳು, ಚಿತ್ರಕಲೆ, ಮಾದರಿ ತಯಾರಿಕೆ ಮುಂತಾದ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಮಕ್ಕಳು ಉತ್ತಮವಾದ ಕಾರ್ಯಕ್ರಮಗಳನ್ನು ನೀಡಿದರು.

ಶಿಬಿರವನ್ನು ಶ್ರೀಮತಿ ಆಶಾಪ್ರಸನ್ನಕುಮಾರ್‌ರವರು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಶ್ರೀವೇಣುಗೋಪಾಲ ಕೃಷ್ಣ, ಶ್ರೀ ಕೆ.ಎಸ್. ಕಮಲ, ಶ್ರೀ ಪ್ರಸನ್ನಕುಮಾರ್ ರೋಟರಿ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಶಿವಕುಮಾರ್, ತೀರ್ಪುಗಾರರಾಗಿ ಶ್ರೀ ಶಿವರುದ್ರಪ್ಪನವರು ಶ್ರೀಮತಿ ಸುಭಾಷಿಣಿ ರವೀಶ್, ಶ್ರೀಮತಿ ನಾಗರತ್ನಮ್ಮ ಮುಂತಾದವರು ಪಾಲ್ಗೊಂಡಿದ್ದರು.

ರೋಟರಿ ತುಮಕೂರು ಪೂರ್ವ ಇವರ ವತಿಯಿಂದ ಬಹುಮಾನಗಳ ವಿತರಣೆ ಮಾಡಲಾಯಿತು.

## ರಾಯಚೂರು ಜಿಲ್ಲೆ

**ಸ್ಕೌಟ್ಸ್ ಗೈಡ್ಸ್‌ಗಳ ಪ್ರಾವಿಣ್ಯತಾ ಪದಕ ಶಿಬಿರ ಮತ್ತು ರಾಜ್ಯ ಪುರಸ್ಕಾರ ಪರೀಕ್ಷೆ :** ಭಾರತ್ ಸ್ಕೌಟ್ಸ್ ಗೈಡ್ಸ್‌ಗಳ ಜಿಲ್ಲಾ ಮಟ್ಟದ ಪ್ರಾವಿಣ್ಯತಾ ಪದಕಗಳ ಶಿಬಿರ ಜಿಲ್ಲಾ ಸ್ಕೌಟ್ಸ್ ಭವನದ ಆವರಣದಲ್ಲಿ ನಡೆಯಿತು. ಶಿಬಿರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ ಉದ್ಘಾಟಿಸಿದರು. ಶ್ರೀ ಆರ್. ನರಸಿಂಹಮೂರ್ತಿ, ಜಿಲ್ಲಾ ಆಯುಕ್ತ ಸ್ಕೌಟ್ಸ್, ಶ್ರೀಮತಿ ಅಜೀಜಾಸುಲ್ತಾನ, ಜಿಲ್ಲಾ ಆಯುಕ್ತೆ (ಗೈಡ್ಸ್) ಉಪಸ್ಥಿತರಿದ್ದರು. ಡಿ.ಓ.ಸಿ. ಶ್ರೀ ಖಾಜಾಹುಸೇನ ಕಾರ್ಯಕ್ರಮ ನಿರೂಪಿಸಿದರು.

ಕೊನೆಯ ದಿನದಂದು ರಾಜ್ಯ ಪುರಸ್ಕಾರ ಪರೀಕ್ಷೆಯು ಜರುಗಿತು. ಮುಖ್ಯಸ್ಥರಾಗಿ ಕೊಪ್ಪಳದ ಶ್ರೀ ಜಯರಾಜಬೂಸದ್ ಆಗಮಿಸಿದ್ದರು.

**ಕಬ್ಸ್, ಬುಲ್‌ಬುಲ್ ಸಿಕ್ಸರ ಕ್ಯಾಂಪ್ ಮತ್ತು ಧ್ವಜ ಬಿಡುಗಡೆ :** ವಿಶ್ವ ಸ್ಕೌಟ್ಸ್ ಶತಮಾನೋತ್ಸವದ ಅಂಗವಾಗಿ ಕಬ್ಸ್, ಬುಲ್‌ಬುಲ್‌ಗಳ ಸಿಕ್ಸರ ಕ್ಯಾಂಪ್ (ಶಿಬಿರ) ಹಾಗೂ ಧ್ವಜ ಬಿಡುಗಡೆ ದಿನಾಚರಣೆಯನ್ನು ಹಮ್ಮಿಕೊಳ್ಳಲಾಗಿತ್ತು. ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಮಾತನಾಡಿದ ಶ್ರೀ ನರಸಪ್ಪ ನಿವೃತ್ತ ಕ್ಷೇತ್ರ

ಶಿಕ್ಷಣಾಧಿಕಾರಿ, ಜಿಲ್ಲೆಯಲ್ಲಿ ಸ್ಕೌಟ್ಸ್ ಗೈಡ್ಸ್ ಚಟುವಟಿಕೆಯುಕ್ತವಾಗಿದ್ದು. ಬೇಗನೆ ಸ್ಕೌಟ್ ಭವನ ನಿರ್ಮಾಣಗೊಂಡು ಸ್ಕೌಟ್ಸ್ ಚಿರಾಯುವಾಗಲಿ ಎಂದರು.

ಶ್ರೀ ಭೀಮಣ್ಣ ಇಟಗಿಯವರು ಧ್ವಜ ಬಿಡುಗಡೆ ಮಾಡಿದರು. ಶ್ರೀ ಈರಣ್ಣ ನಿವೃತ್ತ ಎಲ್.ಐ.ಸಿ. ಅಧಿಕಾರಿ ಉಪಸ್ಥಿತರಿದ್ದರು. ಅಧ್ಯಕ್ಷತೆಯನ್ನು ಶ್ರೀ ಕೆ. ತಿಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು.

ಪ್ರಾಸ್ತಾವಿಕವಾಗಿ ಡಾ|| ಆರ್. ನರಸಿಂಹಮೂರ್ತಿ ಮಾತನಾಡಿದರು. ಶ್ರೀ ಖಾಜಾಹುಸೇನ ಆನಾಹೊಸೂರ ಕಾರ್ಯಕ್ರಮ ನಿರೂಪಿಸಿದರು ಹಾಗೂ ಶ್ರೀ ಜೋಲೇರ ಲಿಂಗಯ್ಯ ವಂದನಾರ್ಪಣೆ ಮಾಡಿದರು.

ಇದೇ ಸಂದರ್ಭದಲ್ಲಿ ಚತುರ್ಥಚರಣ ಪ್ರಶಸ್ತಿ ಪತ್ರಗಳನ್ನು ಕಬ್ಸ್‌ಗಳಿಗೆ ಗಣ್ಯರಿಂದ ಪ್ರದಾನ ಮಾಡಲಾಯಿತು. ಜಿಲ್ಲೆಯ ಎಲ್ಲಾ ತಾಲ್ಲೂಕಿನಿಂದ ಮಕ್ಕಳು ಭಾಗವಹಿಸಿದ್ದರು. ವಿವಿಧ ಸಾಂಸ್ಕೃತಿಕ ಚಟುವಟಿಕೆಗಳು ನಡೆದವು.

## ದಕ್ಷಿಣ ಕನ್ನಡ ಜಿಲ್ಲೆ

ಇತ್ತೀಚೆಗೆ ದಕ್ಷಿಣ ಕನ್ನಡ ಜಿಲ್ಲೆಗೆ ಭೇಟಿ ನೀಡಿದ್ದ ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ರಾಮೇಶ್ವರ್ ಠಾಕೂರ್ ಇವರನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧ್ಯಕ್ಷರೂ ಹಾಗೂ ಜಿಲ್ಲಾಧಿಕಾರಿಗಳೂ ಆದ ಶ್ರೀ ಎಂ. ಮಹೇಶ್ವರ್‌ರಾವ್ ಹಾಗೂ ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಐ.ಎ. ಕೈರನ್ನ ಇವರು ಭೇಟಿಯಾಗಿ ಸಂಸ್ಥೆಯ ಸ್ಕೌಟ್ಸ್ ಗೈಡ್ಸ್ ಚಟುವಟಿಕೆಯ ಬಗ್ಗೆ ವಿವರಿಸಿದರು. ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

ದಿನಾಂಕ 1-11-2007 ರಾಜ್ಯೋತ್ಸವ ದಿನ ದಂದು ಮಧ್ಯಾಹ್ನ 2.00 ಗಂಟೆಗೆ ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಭವನ ಲಾಲ್ ಬಾಗ್ ಮಂಗಳೂರು ಇಲ್ಲಿ ರಾಜ್ಯಪಾಲರಿಂದ ಕೊಡಲ್ಪಟ್ಟ ಸ್ಕೌಟ್ಸ್ ಗೈಡ್ಸ್ ಕಬ್ ಬುಲ್‌ಬುಲ್‌ಗಳ ರಾಜ್ಯ ಪುರಸ್ಕಾರ, ಚತುರ್ಥ ಚರಣ, ಹೀರಕ್ ಪಂಕ್ ಹಾಗೂ ಗೋಲ್ಡನ್ ಆ್ಯರೋ ಪ್ರಶಸ್ತಿ ಪ್ರದಾನ ಸಮಾರಂಭವನ್ನು ನಡೆಸಲಾಯಿತು, ಅತಿಥಿಗಳನ್ನು ಶ್ರೀ ಐ.ಎ. ಕೈರನ್ನ, ಜಿಲ್ಲಾ ಮುಖ್ಯ ಆಯುಕ್ತರು ಸ್ವಾಗತಿಸಿದರು. ಡಾ|| ಸೂಸಾನ್ ಪ್ರಶಸ್ತಿ ಪತ್ರ ವಿತರಿಸಿದರು. ಶ್ರೀ ರಾಮಶೇಷಶೆಟ್ಟಿ, ಜಿಲ್ಲಾ ಕಾರ್ಯದರ್ಶಿ ಧನ್ಯವಾದ ನೀಡಿದರು, ಸ್ಕೌಟರ್ ಶ್ರೀ ಸಂಜೀವ, ಕಾರ್ಯಕ್ರಮ ನಿರ್ವಹಿಸಿದರು.

ದಿನಾಂಕ 1-11-2007 ರಂದು ಕನ್ನಡ ರಾಜ್ಯೋತ್ಸವವನ್ನು ಮಂಗಳೂರು ನೆಹರೂ ಮೈದಾನದಲ್ಲಿ ಅತ್ಯಂತ ವಿಜೃಂಭಣೆಯಿಂದ ಆಚರಿಸಲಾಯಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಪರವಾಗಿ ಮಂಗಳೂರು ನಗರ ವಲಯದ ಸಂತ ಆಲೋಸಿಯಸ್ ಪ್ರೌಢಶಾಲೆಯ ಸ್ಕೌಟ್ಸ್ ಮತ್ತು ಸೈಂಟ್ ಆನ್ಸ್ ಪ್ರೌಢಶಾಲೆಯ ಗೈಡ್‌ಗಳು ಪಥಸಂಚಲನದಲ್ಲಿ ಭಾಗವಹಿಸಿದ್ದರು.

ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ವತಿಯಿಂದ ದಿನಾಂಕ 31-10-2007 ರಿಂದ 7-11-2007ರ ವರೆಗೆ ಆಂಧ್ರಪ್ರದೇಶದ ತಿರುಪತಿಯಲ್ಲಿ ಸ್ವಯಂ ಸೇವಕರಾಗಿ ಮಂಗಳೂರು ಜಿಲ್ಲೆಯಿಂದ ಎಸ್.ಎಂ. ಕುಶೆ ವಿದ್ಯಾ ಸಂಸ್ಥೆ ಅತ್ತಾವರ ಇಲ್ಲಿಯ ರೋವರ್ ಲೀಡರ್ ಶ್ರೀ ಪ್ರತಿಮ್‌ಕುಮಾರ್ ಹಾಗೂ ರೇಂಜರ್ ಲೀಡರ್ ಕು|| ಬಿಂದ್ಯಾ ಶೆಟ್ಟಿಯವರೊಂದಿಗೆ 10 ರೋವರ್ಸ್ ಹಾಗೂ 6 ರೇಂಜರ್ಸ್ ಭಾಗವಹಿಸಿರುದರು.

ಬೆಳ್ತಂಗಡಿ ತಾಲ್ಲೂಕಿನ ವೇಣೂರು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕೈಗಾರಿಕ ತರಬೇತಿ ಕೇಂದ್ರದ ಮಂಜುಶ್ರೀ ರೋವರ್ಸ್ ಒಂದು ದಿನದ ಪ್ರಕೃತಿ ಅಧ್ಯಯನ ಚಾರಣವನ್ನು ಹಮ್ಮಿಕೊಂಡಿದ್ದರು. 30 ರೋವರ್ಸ್‌ಗಳೊಂದಿಗೆ ರೋವರ್ ಲೀಡರ್ ಶ್ರೀ ಟಿ.ವಿ. ಜೇಕೋಬ್ ಭಾಗವಹಿಸಿದ್ದರು.

## ಉಡುಪಿ ಜಿಲ್ಲೆ

**ಮೈಸೂರು ವಿಭಾಗ ಮಟ್ಟದ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳ ಸಮಾವೇಶ -** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯದ ಮೈಸೂರು ವಿಭಾಗ ಮಟ್ಟದ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳ ಸಮಾವೇಶ ದಿನಾಂಕ 8.12.2007 ರಿಂದ 9.12.2007ರ ವರೆಗೆ ಯು. ಕಮಲಾ ಬ್ಯಾ ಪ್ರೌಢಶಾಲೆ, ಕಡಿಯಾಳಿ, ಉಡುಪಿ ಇಲ್ಲಿ ಸಂಘಟಿಸಲಾಯಿತು.

ಸಮಾವೇಶದ ಉದ್ಘಾಟನೆ ದಿನಾಂಕ 8.12.2007 ರಂದು ಪೂರ್ವಹ್ನ 10.30ಕ್ಕೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆಯ ಮಹಾಪೋಷಕರು, ಉಪಾಧ್ಯಕ್ಷರು, ಉಡುಪಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಪಿ. ರವೀಂದ್ರ ನಾಯಕ್‌ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಕೆ. ರಘಪತಿ ಭಟ್, ಮಾಜಿ ಶಾಸಕರು ಶಿಬಿರವನ್ನು ಉದ್ಘಾಟಿಸಿದರು. ಶ್ರೀಮತಿ ಪ್ರತಿಭಾ ಎಲ್. ಸಾಮಗ, ಮುಖ್ಯೋಪಾಧ್ಯಾಯರು ಯು. ಕಮಲಾ ಬ್ಯಾ ಪ್ರೌಢ ಶಾಲೆ, ಕಡಿಯಾಳಿ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ನಾರಾಯಣ ಶೆಟ್ಟಿ, ಎಸ್.ಓ.ಸಿ.(ಎಸ್) ಪ್ರಾಸ್ತಾವಿಕ ಮಾತುಗಳನ್ನಾಡಿದರು. ಶ್ರೀ ಕೆ.ಬಿ. ರಾವ್, ಜಿಲ್ಲಾ ಮುಖ್ಯ ಆಯುಕ್ತರು ಸ್ವಾಗತಿಸಿದರು. ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಧನ್ಯವಾದ ನೀಡಿದರು. ಶ್ರೀಮತಿ ಕೆ.ಕೆ. ಲೀಲಾ, ಎಸ್.ಟಿ.ಸಿ.(ಎಸ್), ಶ್ರೀ ಬಿ.ಜಿ. ವಾರಂಬಳ್ಳಿ ವೇದಿಕೆಯಲ್ಲಿ ಉಪಸ್ಥಿತರಿದ್ದರು. ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಸಂಸ್ಥೆಯ ವತಿಯಿಂದ ಭಾಗವಹಿಸಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದರ್ಶನ ನಿರೂಪಣೆ ಹಾಗೂ ಶತಮಾನೋತ್ಸವ ಆಚರಿಸುತ್ತಿರುವ ಸ್ಕೌಟ್ಸ್ ಚಳುವಳಿಯ ಬಗ್ಗೆ ತಿಳಿಸಿದರು. ಶ್ರೀ ಎಂ. ಪ್ರಭಾಕರ ಭಟ್, ಎ.ಎಸ್.ಓ.ಸಿ.(ಎಸ್) ಶ್ರೀ ಕೊಗ್ಗ ಗಾಣಿಗ, ಶ್ರೀ ಆನಂದ ಆಡಿಗ ಶ್ರೀ ವಿ. ಸದಾಶಿವ ಭಟ್ ಇವರುಗಳು ವಿವಿಧ ವಿಷಯಗಳ ಬಗ್ಗೆ ವಿವರಿಸಿದರು. ಮೈಸೂರು ವಿಭಾಗದ ವಿವಿಧ ಜಿಲ್ಲೆಗಳಿಂದ ಒಟ್ಟು 40 ಕಾರ್ಯದರ್ಶಿಗಳು ಜೊತೆ ಕಾರ್ಯದರ್ಶಿಗಳ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

**ಪಟಾಲಂ ಹಾಗೂ ಷಟ್ಕ ನಾಯಕರ ತರಬೇತಿ ಶಿಬಿರ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಕುಂದಾಪುರ ಇದರ ಪಟಲಾಂ ಹಾಗೂ ಷಟ್ಕ ನಾಯಕರ ತರಬೇತಿ ಶಿಬಿರವು ದಿನಾಂಕ 3-11-2007 ರಿಂದ 4-11-2007ರ ವರೆಗೆ ಶ್ರೀ ವೆಂಕಟ ರಮಣ ಆಂಗ್ಲ ಮಾಧ್ಯಮ ಶಾಲೆ ಕುಂದಾಪುರ ಇಲ್ಲಿ ಜರುಗಿತು. ಉದ್ಘಾಟನಾ ಸಮಾರಂಭದ ಸಭೆಯ ಅಧ್ಯಕ್ಷತೆಯನ್ನು ಸಂಸ್ಥೆಯ ಅಧ್ಯಕ್ಷರಾದ ಶ್ರೀ ದಿನಕರ ಶೆಟ್ಟಿಯವರು ವಹಿಸಿದ್ದರು. ಉದ್ಘಾಟನೆಯನ್ನು ಉದ್ಯಮಿಗಳಾದ ಶ್ರೀ ಕೆ. ದಿನೇಶ್ ಕಾಮತ್ ನಡೆಸಿದರು ಮುಖ್ಯ ಅಥಿತಿಗಳಾಗಿ ಶ್ರೀ ದಿನಕರ ಹೆಗಡೆ ದೈಹಿಕ ಶಿಕ್ಷಣ ಸಂಯೋಜಕರು ಆಗಮಿಸಿದ್ದರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಕೊಗ್ಗ ಗಾಣಿಗ ಉಪಸ್ಥಿತರಿದ್ದರು. ಸಂಸ್ಥೆಯ ಪ್ರಾಂಶುಪಾಲರಾದ ಶ್ರೀ ಸದಾಶಿವ ಭಟ್ ಸರ್ವರನ್ನು ಸ್ವಾಗತಿಸಿ ಶಿಬಿರ ನಾಯಕರಾದ ಸುಬ್ರಮಣ್ಯರವರು ಶಿಬಿರದ ಪಕ್ಷಿನೋಟ ನೀಡಿದರು. ಈ ಸಂದರ್ಭದಲ್ಲಿ ಲಂಡನ್ನಿನ ಹೈಡ್ ಪಾರ್ಕ್‌ನಲ್ಲಿ ಜರುಗಿದ ಶತಮಾನದ ವಿಶ್ವ ಜಾಂಬೂರಿಯಲ್ಲಿ ಪ್ರತಿನಿಧಿಸಿದ ಸಿದ್ಧಾರ್ಥ ಕೊಡ್ಗಿ, ಪವನ್, ಇವರನ್ನು ಸಂಸ್ಥೆಯ ಅಧ್ಯಕ್ಷರಾದ ಶ್ರೀ ದಿನಕರ ಶೆಟ್ಟಿಯವರು ಹೂ ಗುಚ್ಚ ಹಾಗೂ ಪ್ರಮಾಣ ಪತ್ರ ನೀಡಿ ಗೌರವಿಸಿದರು. ಸಂಜೆ ನಡೆದ ಭವ್ಯ ಶಿಬಿರಾಗ್ನಿಯನ್ನು ಮುಖ್ಯೋಪಾಧ್ಯಾಯಿನಿ ಶ್ರೀಮತಿ ಕೆ. ಜಯಂತಿಯವರು ಉದ್ಘಾಟಿಸಿ ಶುಭ ಕೋರಿದರು. ಬಳಿಕ ಸಾಂಸ್ಕೃತಿಕ ಕಾರ್ಯಕ್ರಮ ಜರುಗಿತು.

ದಿನಾಂಕ 4.11.2007ರ ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಸಂಜೆ ನಡೆದ ಸಮಾರೋಪ

ಸಮಾರಂಭದಲ್ಲಿ ಸಭೆಯ ಅಧ್ಯಕ್ಷತೆಯನ್ನು ಸಂಸ್ಥೆಯ ಅಧ್ಯಕ್ಷರಾದ ಶ್ರೀ ದಿನಕರ ಶೆಟ್ಟಿಯವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಪ್ರಭಾಕರ ಮಿತ್ಯಂತ ಪ್ರಭಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಶ್ರೀ ವೆಂಕಟರಮಣ ಆಂಗ್ಲ ಮಾಧ್ಯಮ ಶಾಲೆ. ಕುಂದಾಪುರದ ಕಾರ್ಯದರ್ಶಿ ಶ್ರೀ ಕೆ. ರಾಧಾಕೃಷ್ಣ ಅತಿಥಿಗಳಾಗಿ ಉಪಸ್ಥಿತರಿದ್ದರು. ಸ್ಕೌಟ್ ಚಳವಳಿಯ ಶತಮಾನೋತ್ಸವ ಪ್ರಯುಕ್ತ ನಡೆಸಿದ ರಾಜ್ಯ ಮಟ್ಟದ ಬೇಡನ್ ಪಾವೆಲ್ ಚಿತ್ರ ರಚನಾ ಸ್ಪರ್ಧೆಯಲ್ಲಿ ವಿಜೇತರಿಗೆ ಸಂಸ್ಥೆಯ ಅಧ್ಯಕ್ಷರಾದ ಶ್ರೀ ದಿನಕರ ಶೆಟ್ಟಿಯವರು ಬಹುಮಾನ ವಿತರಿಸಿದರು. ಕಾರ್ಯದರ್ಶಿ ಪಿಯುಸ್ ಡಿ ಸೋಜ ಕಾರ್ಯಕ್ರಮ ನಿರೂಪಿಸಿ ಕೋಶಾಧಿಕಾರಿ ರಾಮಚಂದ್ರ ಉಪಾಧ್ಯಾ ಧನ್ಯವಾದ ಸಲ್ಲಿಸಿದರು.

**ಸ್ಕೌಟ್ ದಳ ಉದ್ಘಾಟನೆ :** ದಿನಾಂಕ 14-11-2007 ರಂದು ಕ್ರಿಸ್ತರೊಯಲ್ ಆಂಗ್ಲ ಮಾಧ್ಯಮ ಶಾಲೆಯಲ್ಲಿ ವಿವೇಕಾನಂದ ಸ್ಕೌಟ್ ದಳ ಉದ್ಘಾಟನೆ ನಡೆಯಿತು. ದಳ ಉದ್ಘಾಟನೆಯನ್ನು ಮ್ಯಾನೆಜಿಂಗ್ ಟ್ರಸ್ಟಿ ಜೋಸೆಫ್ ನಡೆಸಿದರು ಈ ಸಂದರ್ಭದಲ್ಲಿ ಕರೆಸ್ಪೋಡೆಂಟ್ ವರ್ಗೀಸ್, ಶ್ರೀ ಗಣೇಶ್ ಪ್ರಭು ಉಪಸ್ಥಿತರಿದ್ದರು ಸ್ಕೌಟರ್ ಶಿವಾನಂದ ಕಾರ್ಯಕ್ರಮ ನಿರ್ವಹಿಸಿದರು.

## ದಾವಣಗೆರೆ ಜಿಲ್ಲೆ

ಜಿಲ್ಲಾ ಮಟ್ಟದ ಕಬ್ ಮಾಸ್ಟರ್ಸ್, ಸ್ಕೌಟ್ ಮಾಸ್ಟರ್ಸ್ ಹಾಗೂ ಆಡ್ವಾನ್ಸ್ ಸ್ಕೌಟ್ ಮಾಸ್ಟರ್ಸ್ ತರಬೇತಿ ಶಿಬಿರಗಳನ್ನು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 16-11-2007 ರಿಂದ 25-11-2007ರ ವರೆಗೆ ಶ್ರೀ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ಆಯೋಜಿಸಲಾಗಿತ್ತು.

ಕಬ್ ಮಾಸ್ಟರ್ಸ್ ಮೂಲ ತರಬೇತಿಗೆ 14 ಶಿಕ್ಷಕರು ಹಾಜರಾಗಿದ್ದು, ಶ್ರೀ ಎಸ್.ಎಸ್. ಹುಸೇನ್, ಎ.ಎಲ್.ಟಿ. (ಕಬ್) ನಾಯಕರಾಗಿದ್ದರು. ಶ್ರೀಮತಿ ಶಾಂತಕುಮಾರಿ ಇವರು ಸಹನಾಯಕಿ-ಯಾಗಿದ್ದರು.

ಸ್ಕೌಟ್ ಮಾಸ್ಟರ್ಸ್ ಮೂಲ ತರಬೇತಿಗೆ ಶ್ರೀ ಎನ್.ಡಿ. ತಮ್ಮಣ್ಣನವರ್ ಎ.ಎಲ್.ಟಿ. (ಸ್ಕೌಟ್ಸ್) ನಾಯಕರಾಗಿ ಶಂಕರ್ ನಾಯಕ್, ಎಸ್. ಉಮೇಶ್ ಗೌಡ ಪಾಟೀಲ್ ಸಹಾಯಕರಾಗಿ ಇದ್ದರು.

ಅಡ್ವಾನ್ಸ್ ಸ್ಕೌಟ್ ಮಾಸ್ಟರ್ಸ್ ತರಬೇತಿಗೆ ಶ್ರೀ ಫರ್ನಾಂಡಿಸ್ ಬಿ.ಡಿ., ಎಲ್.ಟಿ. (ಸ್ಕೌಟ್ಸ್) ಇವರು ನಾಯಕರಾಗಿದ್ದು, 18 ಸ್ಕೌಟ್ಸ್ ಮಾಸ್ಟರ್ಸ್ ಭಾಗವಹಿಸಿದ್ದರು. ಶ್ರೀ ಮಹಮ್ಮದ್ ವಾಸಿಲ್, ಎಲ್.ಟಿ. (ಸ್ಕೌಟ್) ಸಹ ನಾಯಕರಾಗಿದ್ದರು.

ಜಿಲ್ಲಾ ಶಿಕ್ಷಣ ಸಂಸ್ಥೆಯ ಪ್ರಾಂಶುಪಾಲರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳನ್ನು ಪ್ರೋತ್ಸಾಹಿಸಿದರು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳಾದ ಶ್ರೀ ಅಥಣಿ ಕೊಟ್ರೇಶ್ ಅಧ್ಯಕ್ಷರು, ಶ್ರೀ ಜೆಂಬಿಗಿ ಶರಣಪ್ಪ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಮರುಘರಾಜೇಂದ್ರ ಜೆ. ಚಿಗಟೇರಿ. ಜಿಲ್ಲಾ ಸ್ಕೌಟ್ಸ್ ಆಯುಕ್ತರು, ಇವರುಗಳ ಭೇಟಿ ನೀಡಿದರು. ಶಿಬಿರದ ಸಂಪೂರ್ಣ ಉಸ್ತುವಾರಿಯನ್ನು ಶ್ರೀ ಎಸ್. ಶಂಕರ್ ನಾಯಕ್, ಜಿಲ್ಲಾ ತರಬೇತಿ ಆಯುಕ್ತರು ವಹಿಸಿದ್ದರು.

ಶ್ರೀಮತಿ ಸಿ. ಮಂಜುಳ, ರಾಜ್ಯ ಸಹಾಯಕ ಸಂಘಟನಾ ಆಯುಕ್ತರು ಕಾರ್ಯಕ್ರಮವನ್ನು ಆಯೋಜಿಸಿದ್ದರು.

ಭಾರತ್ ಸ್ಕೌಟ್ಸ್ - ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ದಿನಾಂಕ 22.11.2007 ರಿಂದ 25.11.2007ರ ವರೆಗೆ ಶ್ರೀ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್

ಮತ್ತು ಗೈಡ್ಸ್ ತರಬೇತಿ ಕೇಂದ್ರ ಕೊಂಡಜ್ಜಿ ಇಲ್ಲಿ ಜಿಲ್ಲಾ ಪುರಸ್ಕಾರ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು.

50 ಕಬ್ಸ್, 90 ಬುಲ್‌ಬುಲ್ಸ್, 145 ಗೈಡ್ಸ್, 200 ಸ್ಕೌಟ್ಸ್ ಹಾಗೂ 20 ಶಿಕ್ಷಕರು ಶಿಬಿರದಲ್ಲಿ ಪಾಲ್ಗೊಂಡಿದ್ದರು.

ಶ್ರೀಮತಿ ಬಿ. ರೇವಮ್ಮ, ಎ.ಎಲ್.ಟಿ.(ಬಿ), ಶ್ರೀ ಕುಮಾರಸ್ವಾಮಿ, ಹೆಚ್.ಡಬ್ಲ್ಯೂ.ಬಿ.(ಸಿ), ಶ್ರೀಮತಿ ವಜ್ರಗಂಗಮ್ಮ, ಹೆಚ್.ಡಬ್ಲ್ಯೂ.ಬಿ.(ಜಿ), ಶ್ರೀ ಜೆ.ಎಸ್. ವಿಜಯ ಇವರುಗಳ ನಾಯಕತ್ವದಲ್ಲಿ ಶಿಬಿರ ವ್ಯವಸ್ಥಿತವಾಗಿ ನಡೆಯಿತು.

ಜಿಲ್ಲಾ ಸಂಸ್ಥೆ ಎಲ್ಲಾ ಪದಾಧಿಕಾರಿಗಳು, ಭೇಟಿ ನೀಡಿ ಮಕ್ಕಳನ್ನು ಪ್ರೋತ್ಸಾಹಿಸಿದರು.

## ಕೊಪ್ಪಳ ಜಿಲ್ಲೆ

**ಸ್ಥಳೀಯ ಸಂಸ್ಥೆ ಗಂಗಾವತಿಯಲ್ಲಿ ವಿಶ್ವ ಸ್ಕೌಟ್ ಶತಮಾನೋತ್ಸವ ಆಚರಣೆ –** ಕೊಪ್ಪಳ ಜಿಲ್ಲೆಯ ಸ್ಥಳೀಯ ಸಂಸ್ಥೆ ಗಂಗಾವತಿಯಲ್ಲಿ ದಿನಾಂಕ 8.12.2007 ರಂದು ಸ್ಕೌಟ್ಸ್ ಭವನ ಆವರಣದಲ್ಲಿ ಬೆಳಿಗ್ಗೆ ಧ್ವಜಾರೋಹಣ ಮತ್ತು ನಗರದಲ್ಲಿ ಪಥಸಂಚಲನದೊಂದಿಗೆ ವಿಶ್ವ ಸ್ಕೌಟ್ಸ್ ಶತಮಾನೋತ್ಸವ ಆಚರಣೆ ಪ್ರಾರಂಭವಾಯಿತು.

ಮಧ್ಯಾಹ್ನದ ಅವಧಿಯಲ್ಲಿ ಶತಮಾನೋತ್ಸವದ ಸಮಾರಂಭ ಉದ್ಘಾಟನೆ ಮಾಡಲಾಯಿತು. ಜಿಲ್ಲಾ ಆಯುಕ್ತ ಶ್ರೀ ಹೆಚ್.ಎಂ. ಸಿದ್ದರಾಮಸ್ವಾಮಿ ಹಾಗೂ ರಾಷ್ಟ್ರ ಪ್ರಶಸ್ತಿ ವಿಜೇತರಾದ ಮಲ್ಲಿನಗೌಡ, ಶಾಲಾಮುಖ್ಯಸ್ಥರು ಭಾಗವಹಿಸಿದ್ದರು. ಜಿಲ್ಲೆಯ ಡಿ.ಓ.ಸಿ.ಗಳಾದ ಶ್ರೀ ಐ.ಎ. ಯರ್ರಣ್ಣ ಇವರು ಪ್ರಾಸ್ತಾವಿಕ ಭಾಷಣ ಮಾಡಿದರು.

ಈ ಸಂದರ್ಭದಲ್ಲಿ ಸ್ಥಳೀಯವಾಗಿ ರೋವರ್ಸ್ ಕ್ರ್ಯೂ ಉದ್ಘಾಟಿಸಲಾಯಿತು.

## ಧಾರವಾಡ ಜಿಲ್ಲೆ

ಶ್ರೀ ವೇ.ರಾ.ಪಾ.ಸ.ಪ್ರೌ. ಶಾಲೆ ನಲವಡಿಯಲ್ಲಿ ದಿನಾಂಕ 1-12-2007 ರಂದು ಸ್ಕೌಟ್‌ಗಳಿಗೆ ದೀಕ್ಷಾ ಸಮಾರಂಭ ಏರ್ಪಡಿಸಲಾಗಿತ್ತು. ದೀಕ್ಷಾ ಸಮಾರಂಭದ ಅಧ್ಯಕ್ಷತೆಯನ್ನು ಶಾಲೆಯ ಮುಖ್ಯಾಧ್ಯಾಪಕರಾದ ಶ್ರೀ ಎಂ.ಎಚ್. ಮರಿಗೌಡ್ರ ವಹಿಸಿಕೊಂಡಿದ್ದರು. ಮಕ್ಕಳಿಗೆ ದೀಕ್ಷೆಯನ್ನು ಸ್ಕೌಟ್ಸ್ ಮಾಸ್ಟರ್ ಶ್ರೀ ಡಿ.ಎಚ್. ಟೆಂಕಪ್ಪನವರ ನೀಡಿದರು.

ಇದೇ ದಿನ ವಿಶ್ವ ಏಡ್ಸ್ ದಿನ ಕಾರ್ಯಕ್ರಮದ ಅಂಗವಾಗಿ ಊರಿನ ಪ್ರಮುಖ ಬೀದಿಗಳಲ್ಲಿ ಏಡ್ಸ್ ಜಾಗೃತಿ ಕುರಿತಾದ ಬ್ಯಾನರ್ ಹಾಗೂ ಘೋಷಣೆಗಳೊಂದಿಗೆ ಪ್ರಭಾತಫೇರಿ ನಡೆಸಲಾಯಿತು. ನಂತರ ಶಾಲೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ವಿಶೇಷ ಉಪನ್ಯಾಸ, ಏಡ್ಸ್ ಕುರಿತು ಮಕ್ಕಳಿಂದ ಹಾಗೂ ಶಿಕ್ಷಕರಿಂದ ಭಾಷಣ ಕಾರ್ಯಕ್ರಮ ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಶಾಲೆಯ ಮುಖ್ಯಾಧ್ಯಾಪಕರು ವಹಿಸಿಕೊಂಡಿದ್ದರು. ಅತಿಥಿಗಳಾಗಿ ಸ್ಥಳೀಯ ಮಹಾವಿದ್ಯಾಲಯದ ಉಪನ್ಯಾಸಕರಾದ ಶ್ರೀ ಎಚ್.ಬಿ. ಕಮ್ಮಾರ ವಹಿಸಿಕೊಂಡಿದ್ದರು. ಶ್ರೀ ಎಸ್.ವಿ. ಗುರುಶಾಂತನವರಿಂದ ವಿಶೇಷ ಉಪನ್ಯಾಸ ಜರುಗಿತು.

❀ ❀ ❀ ❀

ಸ್ಕೌಟ್ ಮಾಸ್ಟರ್‌ರ ಮೂಲ ತರಬೇತಿ ಶಿಬಿರ - 'ಸತ್ಯ ಚೇತನ' ಜಿಲ್ಲಾ ತರಬೇತಿ ಕೇಂದ್ರ ದಡ್ಡಿಕಮಲಾಪುರದಲ್ಲಿ ಡಿಸೆಂಬರ್ 8 ರಿಂದ 17ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್ ಮಾಸ್ಟರರ ಮೂಲ ತರಬೇತಿ ಶಿಬಿರವು

ನಡೆಯಿತು. 23 ಶಿಕ್ಷಕರಿದ್ದ ಶಿಬಿರಕ್ಕೆ ಶ್ರೀ ಎಂ.ಎಂ. ಲೋಂಡೆ ಹಾಗೂ 22 ಶಿಕ್ಷಕರಿದ್ದ ಶಿಬಿರಕ್ಕೆ ಶ್ರೀ ಜಿ.ಎ. ಗರಗುಂದ ನಾಯಕರಾಗಿದ್ದರು ಶ್ರೀ ಡಿ.ಎಚ್. ಟೆಂಕಪ್ಪನವರ ಶ್ರೀ ಜೆ.ಆರ್. ಜವಳಿ ಹಾಗೂ ಸ್ಥಳೀಯ ಸಂಸ್ಥೆಯ ಸ್ಕೌಟ್‌ರರ ಸಹಾಯಕರಾಗಿದ್ದರು.

ದಿನಾಂಕ 17 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಎಂ.ಎಚ್. ಷರೀಫ್ ಇವರು ಮುಖ್ಯ ಅತಿಥಿಗಳಾಗಿ ಹಾಗೂ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಆರ್.ಸಿ. ಹಲಗತ್ತಿಯವರು ಅಧ್ಯಕ್ಷರಾಗಿ ಭಾಗವಹಿಸಿದ್ದರು. ಧಾರವಾಡ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ವೀರಣ್ಣ ಜತ್ತಿಯವರು ಹಾಗೂ ಡಿ.ಡಿ.ಪಿ.ಐ. ಕಾರ್ಯಾಲಯದಲ್ಲಿ ವಿಷಯ ಪರಿವೀಕ್ಷಕರಾದ ಶ್ರೀ ಬಿ.ವೈ. ಬಜಂತ್ರಿಯವರು, ಉಪಸ್ಥಿತರಿದ್ದರು. ಸಭೆಯಲ್ಲಿ ಪ್ರೇಮಾ ಮಂಗಳೂರ ಸ್ವಾಗತಿಸಿದರು. ಶ್ರೀ ಜಿ.ಎ. ನರಗುಂದ ವರದಿ ಒಪ್ಪಿಸಿದರು. ಶ್ರೀ ಎಂ.ಎಂ. ಲೋಂಡೆ ವಂದಿಸಿದರು. ಶಿಬಿರಾರ್ಥಿಗಳು ತಮ್ಮ ಅನಿಸಿಕೆಗಳನ್ನು ವಿವರಿಸಿ ವಿವಿಧ ಚಟುವಟಿಕೆಗಳ ಪ್ರದರ್ಶನವನ್ನು ನೀಡಿದರು. ಶ್ರೀ ಜೆ.ಆರ್. ಜವಳಿಯವರು ನಿರೂಪಣೆ ಮಾಡಿದರು. ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಪ್ರಭಾಲೋಂಡೆ ಮಾರ್ಗದರ್ಶನ ನೀಡಿದರು. ಶ್ರೀ ಬಿ.ಕೆ. ಪಾಟೀಲ್ ಉಪಸ್ಥಿತರಿದ್ದರು.

## ಹಾವೇರಿ ಜಿಲ್ಲೆ

**ಜಿಲ್ಲಾಮಟ್ಟದ ಸಮಾವೇಶ** – ದಿನಾಂಕ 14-12-2007 ರಂದು ಜಿಲ್ಲಾ ಗುರುಭವನ ಹಾವೇರಿಯಲ್ಲಿ ಶ್ರೀ ಪ್ರಭಾಕರ್ ರಾವ್ ಮಂಗಳೂರು ಮುಖ್ಯ ಆಯುಕ್ತರು. ಶ್ರೀ ಡಿ.ವಿ. ಬೆಲ್ಲದ ಡಿ.ಡಿ.ಪಿ.ಐ. ಮತ್ತು ಡಿ.ಸಿ.(ಎಸ್) ಇವರು ಸಮಾವೇಶ ಉದ್ಘಾಟನೆ ಮಾಡಿದರು. ಅತಿಥಿಗಳಾಗಿ ಶ್ರೀ ಹೆಚ್.ಎಂ. ಪ್ರೇಮಾ, ಬಿ.ಇ.ಓ. ಮತ್ತು ಎ.ಡಿ.ಎ.ಸಿ.(ಜಿ) ಹಾವೇರಿ, ಶ್ರೀ ಎಂ.ಡಿ. ಬಳ್ಳಾರಿ ಬಿ.ಇ.ಓ. ಮತ್ತು ಎ.ಡಿ.ಸಿ.(ಎಸ್) ಶ್ರೀಮತಿ ಮಾದುರಿ ದೇವದರ ಡಿ.ಸಿ.(ಜಿ) ಶ್ರೀ ಆರ್.ಆರ್. ಕಾಶಪ್ಪನವರ ಡಿ.ಹೆಚ್.ಕ್ಯೂ.(ಎಸ್), ಶ್ರೀ ಕೆ.ಸಿ. ಕೋರಿ ಡಿ.ಹೆಚ್.ಕ್ಯೂ.(ಎಸ್), ಶ್ರೀ ವಿ.ಸಿ. ಮೊಗಲಿ ಶೆಟ್ಟರ ಡಿ.ಹೆಚ್.ಕ್ಯೂ.(ಎಸ್), ಶ್ರೀ ಕೆ.ಆರ್. ಕುಂಠೆ, ಶ್ರೀ ಸಿ.ಐ. ಕೂಗ್ನೂರ, ಶ್ರೀ ಎಂ.ಎಸ್. ಕಲಬುರ್ಗಿ, ಶ್ರೀ ಶಿವಾನರದ ಬಡಶೆಟ್ಟಿ, ಶಿಕ್ಷಣ ಸಂಯೋಜಕರು ಭಾಗವಹಿಸಿದ್ದರು.

ಸಮಾವೇಶದಲ್ಲಿ ಕಮೀಷನರ್ ತರಬೇತಿ ಮುಗಿಸಿ ಬಂದ ಅಧಿಕಾರಿಗಳಿಗೆ ಸನ್ಮಾನ ಮಾಡಲಾಯಿತು. ಶತಮಾನೋತ್ಸವದ ಅಂಗವಾಗಿ ಸಮಾವೇಶದಲ್ಲಿ ಭಾಗವಹಿಸಿದ ಎಲ್ಲರೂ ಪ್ರತಿಜ್ಞೆ ಪುನಾವರ್ತನೆ ಬೋಧನೆ ತೆಗೆದುಕೊಂಡರು.

ಸಮಾವೇಶದಲ್ಲಿ 160 ಸ್ಕೌಟ್ ಮಾಸ್ಟರ್‌ಗಳು, 80 ಗೈಡ್ ಕ್ಯಾಪ್ಟನ್ನರು, 10 ಕಬ್ ಮಾಸ್ಟರ್‌ಗಳು, 8 ಫ್ಲಾಕ್ ಲೀಡರ್‌ಗಳು ಭಾಗವಹಿಸಿದ್ದರು.

## ಉತ್ತರ ಕನ್ನಡ ಜಿಲ್ಲೆ

**ಮಾರ್ಥೋಮಾ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಅಪ್ಸರಕೊಂಡಕ್ಕೆ ನಿಸರ್ಗ ಅಧ್ಯಯನ ಶಿಬಿರ** – ದಿನಾಂಕ 16-12-2007ರಂದು ಮುಂಜಾನೆ 8 ಗಂಟೆಗೆ ಪ್ರಾಂಶುಪಾಲರಾದ ಫಾದರ್ ಥೊಮಸ್ ಮೆಥ್ಯುರವರ ಆಶೀರ್ವಾದದೊಂದಿಗೆ ಶಾಲೆಯಿಂದ ಆರು ಸ್ಕೌಟ್ಸ್ ಮತ್ತು ಆರು ಗೈಡ್ಸ್‌ಗಳು ಅಪ್ಸರ್‌ಕೊಂಡಕ್ಕೆ ಸೈಕಲ್ ಮೇಲೆ ನಿಸರ್ಗ ಅಧ್ಯಯನಕ್ಕೆ ಸಜ್ಜಾಗಿ ಹೊರಟರು. ಅಪ್ಸರಕೊಂಡಕ್ಕೆ ತಲುಪಿ ಧ್ವಜ ವಂದನೆಯೊಂದಿಗೆ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಈ ಶಿಬಿರ ಉದ್ಘಾಟನಾ ಕಾರ್ಯಕ್ರಮದಲ್ಲಿ ಅತಿಥಿಯಾಗಿ ಸ್ಕೌಟ್ ಮಾಸ್ಟರ್ ಶ್ರೀ ಬಿ.ಡಿ. ಫರ್ನಾಂಡೀಸ್‌ರವರು ಉಪಸ್ಥಿತರಿದ್ದು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ನಿಸರ್ಗದ

ಮಹತ್ವ ಕುರಿತು ಹೇಳಿ ಶುಭ ಹಾರೈಸಿದರು. ಅಪ್ಸರಕೊಂಡದಲ್ಲಿ ವನವಿದ್ಯಾ ಸಂಕೇತದ ಸಹಾಯದಿಂದ ಅಪ್ಸರಕೊಂಡ ನಿಸರ್ಗದ ಅಧ್ಯಯನ ಜೊತೆಗೆ ನಿಸರ್ಗವನ್ನು ಕಾಪಾಡುವ ಪ್ರತಿಜ್ಞೆ ಕೈಗೊಂಡರು ಹಾಗೂ ಅಲ್ಲಿನ ಸುಂದರವಾದ ಅಪ್ಸರೆಯರ ಜಲಪಾತವನ್ನು ಕಂಡು ನಿಸರ್ಗದ ಸವಿಯನ್ನು ಉಂಡರು. ಹಾಗೆಯೇ ತಾವೇ ತಯಾರಿಸಿದ ಊಟ ತಿಂಡಿಯನ್ನು ತಿಂದು ಸ್ವಾನುಭವವನ್ನು ಪಡೆದರು. ಈ ಶಿಬಿರದಲ್ಲಿ ಪಟಾಲಂ ಅಡುಗೆಯನ್ನು ಹಮ್ಮಿಕೊಳ್ಳಲಾಗಿತ್ತು. ಸಂಜೆ 4 ಗಂಟೆಗೆ ಫಾದರ್ ಥೊಮಸ್ ಮೆಥ್ಯು ಹಾಗೂ ಮುಖ್ಯಾಧ್ಯಾಪಕಿಯರಾದ ಶ್ರೀಮತಿ ರ್‍ಯಾಚಲ್ ಥೊಮಸ್‌ರವರು ಶಿಬಿರಕ್ಕೆ ಭೇಟಿ ನೀಡಿ ಪಟಾಲಂ ಅಡುಗೆಯ ರುಚಿಯನ್ನು ಸವಿದು ಸ್ಕೌಟ್ಸ್ ಗೈಡ್ಸ್‌ಗಳಿಗೆ ಉತ್ತೇಜನ ಕೊಟ್ಟು ಪ್ರಶಂಸಿದರು ಈ ಶಿಬರದಲ್ಲಿ ಮಿಸ್ ಪ್ರೀತಾರಾವ್‌ರವರು ಉಪಸ್ಥಿತರಿದ್ದರು.

## ಹಾಸನ ಜಿಲ್ಲೆ

**ವಿಶ್ವ ಸ್ಕೌಟ್ ಶತಮಾನೋತ್ಸವ ಮೇಳ ಹಾಗೂ ನೂತನ ಜಿಲ್ಲಾ ಸ್ಕೌಟ್ ಗೈಡ್ ಸಮುದಾಯ ಭವನದ ಉದ್ಘಾಟನೆ :** ದಿನಾಂಕ : 18-12-2007 ಹಾಗೂ 19-12-2007 ರಂದು ವಿಶ್ವ ಸ್ಕೌಟ್ಸ್ ಶತಮಾನೋತ್ಸವದ ಅಂಗವಾಗಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ವತಿಯಿಂದ ನೂತನ ಸ್ಕೌಟ್ಸ್ - ಗೈಡ್ಸ್ ಸಮುದಾಯ ಭವನದ ಉದ್ಘಾಟನೆ ಹಾಗೂ ಜಿಲ್ಲಾ ಸ್ಕೌಟ್ಸ್ - ಗೈಡ್ಸ್ ರ್‍ಯಾಲಿಯನ್ನು ಏರ್ಪಡಿಸಲಾಗಿತ್ತು.

ದಿನಾಂಕ : 18-12-2007 ರಂದು ಸಂಜೆ 4 ಗಂಟೆಗೆ ಜಿಲ್ಲಾ ಸ್ಕೌಟ್ಸ್ - ಗೈಡ್ಸ್ ಭವನದ ಆವರಣದಲ್ಲಿ ಹಾಸನ ನಗರದ ಪೌರಾಯುಕ್ತರಾದ ಡಾ|| ಹೆಚ್.ಎನ್. ಗೋಪಾಲಕೃಷ್ಣರವರು ಉದ್ಘಾಟಿಸಿದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಡಾ|| ವೈ.ಎಸ್. ವೀರಭದ್ರಪ್ಪರವರು ಅಧ್ಯಕ್ಷತೆ ವಹಿಸಿದ್ದರು. ಈ ಸಮಾರಂಭದ ಮುಖ್ಯ ಅತಿಥಿಗಳಾಗಿ ಶಿಕ್ಷಣ ಇಲಾಖೆಯ ಶಿಕ್ಷಣಾಧಿಕಾರಿಗಳಾದ ಶ್ರೀ ಪುಟ್ಟರಾಜು ಹಾಗೂ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಹೆಚ್.ಎಂ. ಗೌಡಯ್ಯರವರು ಉಪಸ್ಥಿತರಿದ್ದರು. ಸಮಾರಂಭದ ಪ್ರಾರಂಭದಲ್ಲಿ ಶ್ರೀ ಚಂದ್ರಾಚಾರ್ ಸ್ವಾಗತಿಸಿ, ಶ್ರೀ ಎಲ್.ಟಿ. ಲೋಕೇಶ್, ಎ.ಎಸ್.ಓ.ಸಿ.ರವರು ಪ್ರಾಸ್ತಾವಿಕ ಭಾಷಣ ಮಾಡಿದರು. ಹಾಗೂ ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್. ಪ್ರಕಾಶ್‌ರವರು ರ್‍ಯಾಲಿಯ ಮುನ್ನೋಟವನ್ನು ತಿಳಿಸಿದರು. ಶ್ರೀ ಡಿ.ಎಸ್. ಪ್ರಕಾಶ್‌ರವರು ವಂದಿಸಿದರು. ಜಿಲ್ಲಾ ಆಯುಕ್ತರು (ಗೈಡ್) ಆದ ಶ್ರೀಮತಿ ಕೈಶರ್ ಶರೀಫ್‌ರವರು ಪಥ ಸಂಚಲನೆಗೆ ಹಸಿರು ನಿಶಾನೆ ತೋರಿ ಚಾಲನೆ ನೀಡಿದರು. ನಂತರ ನಗರದ ಪ್ರಮುಖ ಬೀದಿಗಳಲ್ಲಿ ಸ್ಕೌಟ್ಸ್ - ಗೈಡ್ಸ್‌ನ 1000ಕ್ಕೂ ಅಧಿಕ ವಿದ್ಯಾರ್ಥಿಗಳಿಂದ ಪಥ ಸಂಚಲನ ನಡೆಸಲಾಯಿತು.

ಇದೇ ದಿನ ಸಂಜೆ 7 ಗಂಟೆಗೆ ಹಾಸನ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಹೆಚ್.ಕೆ. ಪುಷ್ಪಲತರವರು ಭವ್ಯ ಶಿಬಿರಾಗ್ನಿಯನ್ನು ಉದ್ಘಾಟಿಸಿ ನಿವೃತ್ತ ತಹಶೀಲ್ದಾರ್ ಹಾಗೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ನಿರ್ವಾಣಯ್ಯರವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ವಿವಿಧ ಶಾಲೆಗಳ ಸ್ಕೌಟ್ಸ್ - ಗೈಡ್ಸ್, ಕಬ್ಸ್ ಬುಲ್‌ಬುಲ್ಸ್ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಲಾಯಿತು.

ದಿನಾಂಕ : 19-12-2007 ರಂದು ಬೆಳಿಗ್ಗೆ 7-30ಕ್ಕೆ ಶ್ರೀ ಆದಿಚುಂಚನಗಿರಿ ಶಾಖಾಮಠದ ಶ್ರೀ ಶ್ರೀ ಶಂಭುನಾಥಸ್ವಾಮಿಗಳು, ದಿವ್ಯ ಸಾನಿಧ್ಯವಹಿಸಿ ಫಾದರ್ ಸಿರಿಯಾರ್ ಟಿ.ಜೆ. ಕ್ರೈಸ್ತ ಧರ್ಮಗುರುಗಳು ಹಾಗೂ ಶ್ರೀ ಅಬ್ದುಲ್ ಮುಸ್ಸಾವೀರ್ ಸಾಹೇಬರ್‌ರವರು ಇಮಾಮ್ ಜಾಮಿಯಾ ಮಸೀದಿ ಇಸ್ಲಾಂ ಧರ್ಮ ಸರ್ವಧರ್ಮ ಪ್ರಾರ್ಥನೆಯನ್ನು ನೆರವೇರಿಸಿದರು.

ದಿನಾಂಕ : 19-12-2007ರ ಬುಧುವಾರ ಬೆಳಿಗ್ಗೆ 11 ಗಂಟೆಗೆ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ನೂತನ

ಸಮುದಾಯ ಭವನದ ಉದ್ಘಾಟನೆಯನ್ನು ಪರಮ ಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ ಶಿವರಾತ್ರೀ ದೇಶೀಕೇಂದ್ರ ಮಹಾಸ್ವಾಮಿಗಳು, ಸುತ್ತೂರು ಮಹಾ ಸಂಸ್ಥಾನ ಮಠ ಮೈಸೂರು. ಇವರು ನೆರವೇರಿಸಿದರು.

ಶ್ರೀ ಶ್ರೀ ಶ್ರೀ ಶಿವಾನಂದ ಶಿವಯೋಗಿ ರಾಜೇಂದ್ರ ಮಹಾ ಸ್ವಾಮಿಗಳು ಸುಕ್ಷೇತ್ರ ಕೋಡಿಮಠ, ಹಾರನಹಳ್ಳಿ, ಶ್ರೀ ಆದಿಚುಂಚನಗಿರಿ ಶಾಖಾ ಮಠದ ಶ್ರೀ ಶ್ರೀ ಶಂಭುನಾಥ ಸ್ವಾಮಿಗಳು ಉಪಸ್ಥಿತರಿದ್ದು ಸಮಾರಂಭದ ಅಧ್ಯಕ್ಷತೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪರವರು ವಹಿಸಿದ್ದರು. ಸಮಾರಂಭದ ಮುಖ್ಯ ಅತಿಥಿಗಳಾಗಿ ಶ್ರೀ ಕೆ.ಹೆಚ್. ಅಶ್ವತ್ಥನಾರಾಯಣಗೌಡ, ಮಾನ್ಯ ಜಿಲ್ಲಾಧಿಕಾರಿಗಳು ಹಾಸನ ವಹಿಸಿದ್ದರು.

ಈ ಸಮಾರಂಭದ ಪ್ರಾರಂಭದಲ್ಲಿ ಸಾಮೂಹಿಕ ಸ್ಕೌಟ್ಸ್ ಪ್ರಾರ್ಥನೆಯೊಂದಿಗೆ ಪ್ರಾರಂಭಿಸಿ ಜಿಲ್ಲಾ ಸ್ಕೌಟ್ ಆಯುಕ್ತ ಡಾ|| ವೈ.ಎಸ್. ವೀರಭದ್ರಪ್ಪನವರು ಸ್ವಾಗತಿಸಿದರು. ಕುಮಾರಿ ಶ್ರೀ ವೈ.ವಿ. ಗಾನವಿ. ಗೈಡ್ ವಿದ್ಯಾರ್ಥಿ ದೂಪಾರತಿ ಸ್ವಾಗತ ನೃತ್ಯ ನೀಡಿ, ಸಮಾರಂಭದ ಕೊನೆಯಲ್ಲಿ ಸಹಾಯಕ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಹೆಚ್.ಎಂ. ಗೌಡಯ್ಯರವರು ವಂದನಾರ್ಪಣೆ ಸಲ್ಲಿಸಿದರು. ಬೆಂಗಳೂರು ಆಕಾಶವಾಣಿ ವರದಿಗಾರರಾದ ಶ್ರೀಮತಿ ಸವಿತಾ ಶಿವಕುಮಾರ್‌ರವರು ಕಾರ್ಯಕ್ರಮವನ್ನು ಅಚ್ಚುಕಟ್ಟಾಗಿ ನಿರೂಪಿಸಿದರು.

ಡಾ|| ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಆಯುಕ್ತರು (ಸ್ಕೌಟ್) ಹಾಸನ ಇವರಿಗೆ ಹಾಗೂ ಶ್ರೀ ಹೆಚ್.ಎಂ. ಗೌಡಯ್ಯ, ಸಹಾಯಕ ಜಿಲ್ಲಾ ಆಯುಕ್ತರು ಚನ್ನರಾಯಪಟ್ಟಣ ಇವರಿಗೆ ಮೆಡಲ್ ಆಫ್ ಮೆರಿಟ್ ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ಹಿಮಾಲಯ ವುಡ್ ಬ್ಯಾಡ್ಜ್ ಪಡೆದ ಐದು ಜನ ಸ್ಕೌಟರ್ಸ್ - ಗೈಡರ್ಸ್‌ಗಳಾದ ಶ್ರೀಮತಿ ಸೋಫಿಯಾ ಫರ್ನಾಂಡೀಸ್, ಶ್ರೀಮತಿ ಯಶೋಧ ಗೋಪಿನಾಥ್, ಶ್ರೀಮತಿ ಅನುರಾಧ, ಶ್ರೀ ಜಗದೀಶ್ ಸ್ಕೌಟ್ ಮಾಸ್ಟರ್, ಹೊಳೆನರಸೀಪುರದ ಇವರುಗಳಿಗೆ ಪಾರ್ಚ್‌ಮೆಂಟ್ ಮತ್ತು ಬೀಡ್ಸ್‌ನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ನೀಡಿ ಗೌರವಿಸಿದರು.

## Bangalore South District

*Testing Camp for Rajyapuaskar Scouts and Guides and Chaturtha Charan Cubs was held at Dr. Annie Besant Park from 23-26 Nov 2007. Mr. M.V. Janardhan ALT(S) was leader for Scouts and Mrs. Shardamma ALT(G) was leader for Guide Section Mr. M. Lakshminarayan, ALT(C) was leader for Cub Section.*

*200 Scouts and Guides attended the camp Mr. M.K. Khan, DCC, ALT(S) was the Chief Guest for Camp fire.*

*Testing Camp for Scouts and Guides of Tritya Sapan was held at Dr. Annie Besant Park from 23-26 Nov. 2007. Mr. M.S. Satheesh, HWB(S) was the leader for Scout Section and Mrs. Vijaya Lakshmi was the leader for Guides Section. Mr. P. Palani, District Commissioner (S) was the Guest for closing Ceremony.*

## ಜ್ಯೋತಿ ಬಸಪ್ಪ

*ಕನ್ನಡ ಸ್ಕೌಟ್ ಗೈಡ್ ಚಾಲಕ ಬಸಪ್ಪ*
*ಮಕ್ಕಳ ದಿನವೇ ಮಡಿದಿಹೆಯಪ್ಪ*
*ಕೊಂಡಜ್ಜಿ ಗುಡ್ಡದಿ ಅಡಗಿಹೆಯಪ್ಪ*
*ಸ್ಕೌಟ್ ಗೈಡ್‌ಯಿದ್ದಲ್ಲಿ ಇಣುಕುವೆಯಪ್ಪ ॥೧॥*

*ಕೊಂಡಜ್ಜಿ ಸುಪುತ್ರ ಕನ್ನಡ ಕುವರ*
*ಕಾಣಿಕೆ ಕೊಟ್ಟಿಹೆ ಸ್ಕೌಟ್ ಗೈಡ್ ಶಿಬಿರ*
*ಷಷ್ಠ್ಯಬ್ದಿಪೂರ್ತಿಗೆ ಬಂದ ಉಡುಗೊರೆ*
*ಸಂಸ್ಥೆಗೆ ನೀಡಿದ ದಾನಶೂರ ಸ್ಕೌಟ್ ಸೇನಾನಿ ॥೨॥*

*ಮುತ್ಸದ್ದಿ ಮೃದುಭಾಷಿ ಕೊಂಡಜ್ಜಿ ಬಸಪ್ಪ*
*ಮುಗುಳುನಗೆಯ ಮೋಡಿ ಮಾಡಿದೆಯಪ್ಪ*
*ದಾನಿಗಳ ತಂದು ಶಿಬಿರ ಬೆಳೆಸಿದೆಯಪ್ಪ*
*ಸ್ಕೌಟ್ ಗೈಡ್ ಚಳವಳಿ ಬೆಳಸಿದೆಯಪ್ಪ ॥೩॥*

*ನಿಸ್ವಾರ್ಥ ಸದಾಚಾರಿ ರಾಜಕಾರಿಣಿಯಪ್ಪ*
*ನಿನಗಿಷ್ಟ ಮಕ್ಕಳ ದೇಶದ ಭವಿಷ್ಯವಪ್ಪ*
*ಸೇವಾಭಾವದಿ ಸೆಣಸಿಹೆಯಪ್ಪ*
*ಭಾರತ ಸ್ಕೌಟ್ ಗೈಡ್‌ಗಾಗಿಹೆಯಪ್ಪ ॥೪॥*

*ನಿನ್ನಯ ಗುಣಗಾಣ ಮಾಡಿಯೆ ಮುಗಿಯದು*
*ನಿನ್ನಯ ಕಾರ್ಯವ ಬಣ್ಣಿಸಿಯೆ ದಣಿಯದು*
*ಕಾಯಕದಿ ಕೈಲಾಸ ಕಂಡಿಹ ಕರ್ಮ ಯೋಗಿ*
*ನೀನಿರುವೆ ನಮಗೆಲ್ಲ ನಿತ್ಯ ಜ್ಯೋತಿಯಾಗಿ ॥೫॥*

*ರಚನೆ :* ***ಕು॥ ಪ್ರೇಮಾ ಜಿ.*** *ಮಂಗಳೂರು, ಬನವಾಸಿ*

## ಸಾರ್ಥಕ ಮನುಷ್ಯನ ಒಂಬತ್ತು ಲಕ್ಷಣಗಳು

ಆಸೆ-ಕೋಪ-ನಾಲಿಗೆ - ಈ ಮೂರನ್ನು ಹತೋಟಿಯಲ್ಲಿಡು.
ವ್ಯಾಪಾರ-ಪ್ರಮಾಣ-ಮದುವೆ - ಈ ಮೂರಕ್ಕೆ ಆತುರಪಡಬೇಡ
ಬುದ್ಧಿಶಕ್ತಿ-ಸಾಮರ್ಥ್ಯ-ಸಂತೋಷ - ಈ ಮೂರಕ್ಕೆ ಬೆಲೆಕೊಡು.
ಹಣ-ಸಮಯ-ಶಕ್ತಿ - ಈ ಮೂರನ್ನು ವ್ಯರ್ಥ ಮಾಡಬೇಡ
ಧರ್ಮ-ನ್ಯಾಯ-ವಿನಯ - ಈ ಮೂರಕ್ಕೆ ಗೌರವ ಕೊಡು
ದೇಶ-ಗೌರವ-ರಾಷ್ಟ್ರಧ್ವಜ - ಈ ಮೂರಕ್ಕೆ ಹೋರಾಡು
ಧೈರ್ಯ-ವಾತ್ಸಲ್ಯ-ಶಿಷ್ಟಾಚಾರ - ಈ ಮೂರನ್ನು ಪ್ರೀತಿಸು
ಅನ್ಯಾಯ-ಅಹಂಕಾರ-ಸ್ವಾಮಿದ್ರೋಹ - ಈ ಮೂರನ್ನು ದ್ವೇಷಿಸು
ಸಾವು-ದುಃಖ-ಸೋಲು - ಈ ಮೂರಕ್ಕೆ ಸಿದ್ದನಾಗಿರು

– ಅನಾಮಿಕ

# GONE HOME



## Sri Jambagi Sharanappa

District Chief Commissioner, Bharat Scouts & Guides
& Income Tax & Sales Tax Consultant, Davanagere

Passed away on 16th December 2007 at Davanagere

The Bharat Scouts and Guides, Karnataka record with deep regret the Sad and Sudden demise of Sri. Jambagi Sharanappa, District Chief Commissioner, Bharat Scouts and Guides, Davanagere, passed away on 16th December 2007 at Davanagere at the Age of 73.

He leaves behind him Wife, Two Sons, One Daughter along with many Grand Children.

Sri. Jambagi Sharanappa, served as the President of City Municipal Council, Davanagere and associated with many Educational, Social and Cultural Organisation in Davanagere City for more than Four Decades.

He served as the District Commissioner (Scouts) and presently Functioning as District Chief Commissioner of Scouts and Guides from 1994 till date.

During his tenure as District Chief Commissioner he and his Team successfully conducted the 25th State Jamborette of Karnataka State at Davanagere during January 2006.

He is responsible for the construction of a Multistoried Complex in the Scout Headquarters premises at Davanagere recently.

We Pray God Almighty to give necessary Courage and strength to his Wife and Other Family Members to bear this Irreparable loss.

We, the Members of the Bharat Scouts and Guides, Karnataka Join them in Praying for the Departed Soul.



ದಿನಾಂಕ 7-11-2007 ರಿಂದ 9-11-2007ರವರೆಗೆ ಗಂಜಾರ ಗೇಟ್ ಕೋಲಾರ ಉತ್ತರ ಜಿಲ್ಲೆಯಲ್ಲಿ ನಡೆದ ಪದಕಾರ್ಜನ ಶಿಬಿರದಲ್ಲಿ ಪಾಲ್ಗೊಂಡ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.



ಬೀದರ್‌ನಲ್ಲಿ ಇತ್ತೀಚಿಗೆ ನಡೆದ ಶಿಬಿರದಲ್ಲಿ ಪಾಲ್ಗೊಂಡ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು



ದಿನಾಂಕ 3-11-07 ರಂದು ಚಿಕ್ಕಮಗಳೂರಿನ ಬಳಿ ಇರುವ ಛತ್ರಿ ಮಠದ ಹೊರ ಸಂಚಾರದಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.



ವಿಶ್ವ ಸ್ಕೌಟ್ಸ್ ಶತಮಾನೋತ್ಸವದ ಅಂಗವಾಗಿ ಕೊಪ್ಪದ ಉಪ್ಪಾರಪೇಟೆ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳಿಗೆ ಪ್ರಮಾಣ ಪತ್ರ ವಿತರಿಸುತ್ತಿರುವುದು




ದಿನಾಂಕ 4-11-07ರಂದು ಬೀದರ್‌ನಲ್ಲಿ ಸ್ಕೌಟಿಂಗ್ ಶತಮಾನೋತ್ಸವದ ಅಂಗವಾಗಿ ನಡೆದ ಸಮಾರಂಭದಲ್ಲಿ ಉಪ ನಿರ್ದೇಶಕರಾದ ಶ್ರೀ ಎಂ. ದೇವಾನಂದ, ಶ್ರೀಮತಿ ರೇಶ್ಮ ಬಲಬೀರ್‌ಸಿಂಗ್, ಜಿಲ್ಲಾ ಕಾರ್ಯದರ್ಶಿಯಾದ ಶ್ರೀ ಶೇಖ್ ಮುಸ್ತಾಖ್‌ಅಲಿ ಭಾಗವಹಿಸಿ ಧ್ವಜ ಬಿಡುಗಡೆ ಮಾಡಿದರು.



ದಿನಾಂಕ 01-11-2007 ರಂದು ಮಂಡ್ಯದಲ್ಲಿ ನಡೆದ ಕನ್ನಡ ರಾಜ್ಯೋತ್ಸವ ದಿನಾಚರಣೆಯಂದು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.






# Karnataka Scout & Guide News Magazine

Wishes its Readers, Subscribers, Advertisers, Well Wishers
Cubs, Bulbuls, Scouts, Guides, Rovers & Rangers
Unit Leaders, Parents, Members of the Movement

## A Very Happy & Prosperous New Year - 2008

100 A Hundred years of Promise 2007
Scouting Celebrates Centenary In 2007

YOUR SUPPORT WILL HELP US TO REACH OUR GOAL



Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 31-12-2007



ಸ್ಕೌಟ್ ಶತಮಾನೋತ್ಸವ - 2007

Price Rs. 3.00/- per copy only



ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

**Karnataka Scout & Guide** *News Magazine*

**If not delivered please return to :**

EDITOR, Karnataka Scout & Guide
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227

38. SMT. K.K.LEELA
State Training Commissioner (S)
C/o Bharat Scouts and Guides
# 39, Shanthi Gruha, Palace Road
Bangalore-560001.

published for : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.